# ಮುನ್ನುಡಿ

ಮದುವಣಗಿತ್ತಿಯನ್ನು ವಿವಾಹಮಂಟಪಕ್ಕೆ ಕರೆತರುವ ಕೆಲಸವನ್ನು ಸೋದರಮಾವನೋ ಅಕ್ಕನ ಗಂಡನೋ ಮಾಡುವ ರೂಢಿ ಕೆಲವೆಡೆಗಳಲ್ಲಿ ಉಂಟು. ಅದೇ ಬಗೆಯಾಗಿ ಕನ್ನಡದಲ್ಲಿ ಲೇಖಕರು ತಮ್ಮ ಕೃತಿಗಳನ್ನು ಜನತೆಯ ಮುಂದಿಡಲು ಮುನ್ನುಡಿಕಾರರನ್ನು ತಮ್ಮ ಸೋದರಮಾವಂದಿರನ್ನಾಗಿ ಮಾಡಿಕೊಳ್ಳುವ ಸಂಪ್ರದಾಯವು ಇತ್ತೀಚೆಗೆ ಹೆಚ್ಚಾಗಿ ಬೆಳೆದಿದೆ. ನನ್ನ ತರುಣಮಿತ್ರ ಶ್ರೀ ವಾಡಪ್ಪಿಯವರು ಈ ಸೋದರಮಾವತನವನ್ನು ನನಗೆ ಕೊಡಲು ಯಾಕೆ ಮನಸ್ಸುಮಾಡಿದರೋ ನಾನರಿಯೆ. ಆದರೆ ಅವರು ನನ್ನನ್ನು ಸೋದರಮಾವತನವನ್ನು ವಹಿಸಿಕೊಳ್ಳಲು ಬಿನ್ನವಿಸಿಕೊಂಡಾಗ ಸಾಹಿತ್ಯ ಕ್ಷೇತ್ರದಲ್ಲಿ ಅವರ ಮನೆತನ ನಮ್ಮ ಮನೆತನಗಳು ಸಮೀಪದ ಹತ್ತುಗಡೆಯ ಮನೆತನಗಳೆಂದು ನನ್ನನ್ನು ಈ ಕೆಲಸಕ್ಕೆ ಆಯ್ದಿರಬಹುದೆಂದೆನಿಸಿತು. ಅದೊಂದೇ ಕಾರಣದಿಂದ ಅವರು ಒಪ್ಪಿಸಿದ ಕೆಲಸವನ್ನು ಸಂತೋಷದಿಂದ ಮಾಡಲಣಿಯಾಗಿದ್ದೇನೆ. ಏಕೆಂದರೆ ಯಾವ ಕಷ್ಟನಿಷ್ಠುರಗಳೂ ಇಲ್ಲದೆ ಗೌರವದ ಸ್ಥಾನವೊಂದು ಸಿಕ್ಕುವುದಾದರೆ ಯಾರಿಗೆ ಬೇಡ ?

ಶ್ರೀ ವಾಡಪ್ಪಿಯವರು ಬರೆದ ಈ ಚಿಕ್ಕ ಹೊತ್ತಗೆಯ ಅಚ್ಚಿನ ಹಸಿ ಹಾಳೆಗಳನ್ನು ಓದಿದರೂ ನಾನು ವಹಿಸಿಕೊಂಡ ಕೆಲಸದ ಬಗೆಗೆ ಯಾವ ಪಶ್ಚಾತ್ತಾಪವೂ ಆಗಲಿಲ್ಲ. ಓದುಗರಿಗೂ ಹೀಗೆಯೆ ಅನಿಸೀತೆಂದು ನನ್ನ ನಂಬಿಕೆ ಮತ್ತು ಹಾರೈಕೆ. ಇಲ್ಲಿ ನಮ್ಮ ದೈನಂದಿನ ಜೀವನದಲ್ಲಿ ನಮಗೆ ಆಗಾಗ್ಗೆ ಎದುರಾಗುವ ಮಾದರಿಯ ಏಳು ವ್ಯಕ್ತಿಗಳ ಚಿತ್ರಗಳು ಚೆನ್ನಾಗಿ ಮೂಡಿವೆ. ಅವು ಕಥೆಗಳ ರೂಪವನ್ನು ತಳೆದಿರಬಹುದು. ಆದರೆ ಒಂದೊಂದರಲ್ಲಿಯೂ ಮನುಷ್ಯ ಜೀವಿತದ, ಸ್ವಭಾವದ ಒಂದೊಂದು ಮುಖವನ್ನು ಎತ್ತಿತೋರಿಸಲಾಗಿದೆ. ಇಹ ಜೀವನದಲ್ಲಿ ತನಗಾವ ಸ್ವಕೀಯ ಆಶೆ ಆಕಾಂಕ್ಷೆಗಳು ಇಲ್ಲವಾದರೂ ಪರಕೀಯರ ಸುಖ ದುಃಖಗಳಲ್ಲಿ ಸಮರಸ ಹೊಂದಿದ

ಮುಸ್ಲಿಂ ಮಹಿಳೆ ‘ಬೂಬೂ’ನ ಬಾಳು ಸಮುದ್ರದಾಳದಲ್ಲಿ ಅಜ್ಞಾತವಾಗಿ ಬೆಳಗುತ್ತಿರುವ ಒಂದು ರತ್ನವೇ ಸೈ. ಸಿಂಗನಂತಹ ಕೃತಜ್ಞರು ಈ ಕುತರ್ಕವ ಯುಗದಲ್ಲಿ ವಿರಳವಾಗಿದ್ದರೂ ಇನ್ನೂ ಇದ್ದೇ ಇರುವರು. “ಗಂಗೆ ಅಳಿದ ಗಂಗಮ್ಮ” ಗುಣಕ್ಕೆ ಜಾತಿ ಪಂಥಗಳ ಕಟ್ಟಿಲ್ಲೆಂದು ಸಾರಿ ಹೇಳುತ್ತಿದ್ದಾಳೆ. ಮೋಟಾರ ಮಹಮ್ಮದರನ್ನೂ ನೀವು ಅಲ್ಲಲ್ಲಿ ಕಂಡು, “ಸುಡು ನನ್ನ ವಿಶ್ವವಿದ್ಯಾಲಯ ಪದವಿಯನ್ನು” ಎಂದುಕೊಂಡಿರಬಹುದು. ರೇಲ್ವೆ ನಿಲ್ದಾಣದಲ್ಲಿ ಚಳಿಯಲ್ಲಿ ನಡುಗುವ ಅನಾಥ ಹುಡುಗರನ್ನು ಕಂಡು ನೀವೂ ಲೇಖಕರಂತೆ “ಯಾರು ಹೊಣೆ” ಎಂದು ಪೆಚ್ಚಾಗಿರಬಹುದಲ್ಲವೆ ?

ಈ ಚಿತ್ರಗಳನ್ನು ನಿಮ್ಮ ಮುಂದಿಡುವಲ್ಲಿ ಲೇಖಕರು ಇಂದಿನ ಜನಜೀವನದ ವಿರೋಧಾಭಾಸಗಳನ್ನು ಹಿತಮಿತವಾದ ಮಾತುಗಳಲ್ಲಿ ಅಲ್ಲಲ್ಲಿ ಟೀಕಿಸಿರುವರು. ಆದರೆ ಅವು ಎಲ್ಲಿಯೂ ಕಟುವಾಗಿಲ್ಲ.

ಲೇಖಕರದು ಆಶಾದೃಷ್ಟಿಯೇ ಹೊರತು ವಿಷಾದದೃಷ್ಟಿಯಲ್ಲ. ಬಾಳುವೆಯಲ್ಲಿಯ ಚೆಲುವಿನ ಅರಿವು ಅವರಿಗಿದೆ. ಇಂದು ನಮಗೆ ಬೇಕಾದುದೂ ಅದೇ ದೃಷ್ಟಿ.

ಶ್ರೀ ವಾಡಪ್ಪಿಯವರಿನ್ನೂ ಎಳೆವರೆಯದ ಬರೆಹಗಾರರು. ಅವರ ಮುಂದೆ ವಿಶಾಲವಾದ ಉನ್ನತವಾದ ಬಾಳೇ ಇದೆ. “ವ್ಯವಸಾಯಾತ್ಮಕಾ ಬುದ್ಧಿಃ” ಎಂದು ಹಿರಿಯರು ಹೇಳಿದ್ದಾರೆ. ವ್ಯವಸಾಯದಿಂದ ಅಭ್ಯಾಸಬಲದಿಂದ ವಾಙ್ಮಯ ತಪಸ್ಸಿನಿಂದ ಉತ್ತಮ ಕೃತಿಗಳನ್ನು ನಿರ್ಮಿಸುವ ಅವಕಾಶವೂ ಅರ್ಹತೆಯೂ ಅವರಿಗೆ ಉಂಟೆಂದು ಧೈರ್ಯವಾಗಿ ಹೇಳುವಷ್ಟು ಪ್ರತಿಭೆಯ ಅಂಶವನ್ನು ಇವರ ಕೃತಿಯಲ್ಲಿ ಕಾಣಬಹುದು. ಮೂಲಧನವಂತೂ ಇದೆ. ಅದನ್ನು ಚೆನ್ನಾಗಿ ಬೆಳೆಸುವ ಮಾರ್ಪಡಿಸುವ ಉದ್ಯಮಶೀಲತೆ, ಕರ್ಮಕೌಶಲ, ಸನ್ನಿವೇಶಸೌಕರ್ಯ ಮೊದಲಾದವುಗಳು ಶ್ರೀ ವಾಡಪ್ಪಿಯವರಿಗೆ ಲಭಿಸಲೆಂದು ಹಾರೈಸುತ್ತೇನೆ; ಹರಸುವ ಹಿರಿಮೆ ನನಗಿನ್ನೂ ಬಂದಿಲ್ಲ.

ಹುಬ್ಬಳ್ಳಿ
ಸಂಯುಕ್ತ ಕರ್ನಾಟಕ
ಕಾರ್ಯಾಲಯ
೧೭-೧೨-೧೯೪೯

ನಾಯಿಕ ವೆಂಕಟರಾಯ

# ನನ್ನ ನುಡಿ

ನನ್ನದೊಂದು ಚಿಕ್ಕ ಕಥಾಸಂಕಲನವನ್ನು ಬೆಳಕಿಗೆ ತರಬೇಕೆಂಬ ಆಶೆ ಬಹುದಿವಸಗಳಿಂದ ಮನದಲ್ಲಿ ಮೂಡಿತ್ತು. ಆ ಕೆಲಸವು ನನ್ನ ಹಲವು ಗೆಳೆಯರ ಒತ್ತಾಯದಿಂದ ಈಗ ಫಲಿಸಿದೆಂದು ಹೇಳಬಹುದು. ಈ ಚಿಕ್ಕಹೊತ್ತಿಗೆಯಲ್ಲಿ ಏಳು ಕಥೆಗಳನ್ನು ಪವಣಿಸಲಾಗಿದೆ. ಎಲ್ಲ ಕಥೆಗಳ ವಸ್ತುವು ಸಾಮಾಜಿಕ ಜೀವನವನ್ನೇ ಕುರಿತುದಾಗಿದೆ. ಸಿಹಿ, ಕಹಿಯಿಂದ ಕೂಡಿದ ಜೀವನವನ್ನು ಚಿತ್ರಿಸುವಾಗ, ನಮ್ಮ ಸತ್ಯಪ್ರಪಂಚವನ್ನು ಬಿಟ್ಟು ಹೊರಗೆ ನೋಡುವದೆಂತು ? ಸತ್ಯ ಪ್ರಪಂಚದಲ್ಲಿ ಕಂಡುದದನ್ನು , ಅನುಭವಿಸಿದುದನ್ನು , ಸಾಹಿತ್ಯದಲ್ಲಿಳಿಸುವಾಗ ಅನೇಕ ಮಾರ್ಪಾಡುಗಳನ್ನು ಮಾಡಬೇಕಾಗುತ್ತದೆ. ನನಗೆ ಅನಿಸಿದ, ಕಂಡ, ವಿಷಯುಗಳನ್ನೇ ಕಥಾರೂಪದಲ್ಲಿ ಇಲ್ಲಿ ಇಟ್ಟಿದ್ದೇನೆ. " ಗಂಗೆ ಅಳೆದ ಗಂಗವ್ವ " ಒಂದು ಪವಾಡರೂಪದ ಕಥೆಯಾದರೂ, ನಮ್ಮ ಹಿಂದಿನ ಕನ್ನಡಿಗರ ಜನಜೀವನದ ಮಟ್ಟವನ್ನು ತೋರಿಸಲು ಅಲ್ಲಿ ಯತ್ನಿಸಿದುದಾಗಿದೆ. ಇರಲಿ. ಇದು ನನ್ನ ಸಂಕಲನದ ಸಾಮಾನ್ಯ ರೂಪ ರೇಷೆಯಾದರೂ—ಇದನ್ನು ಕಂಡು ಮೆಚ್ಚುವದು ಸಹೃದಯ ವಾಚಕರನ್ನೇ ಕೂಡಿದೆ. ಈ ನನ್ನ ಅಲ್ಪ ಕಾಣಿಕೆಯನ್ನು ಕುರಿತು ಹೆಚ್ಚು ಬರೆಯಲಾರೆ.

ಇನ್ನು ಮುನ್ನುಡಿಯ ವಿಚಾರ. ಈ ಪುಸ್ತಕಕ್ಕೆ ಮುನ್ನುಡಿಯನ್ನು ಬರೆದು ಕೊಡಬೇಕೆಂದು ಕೇಳಿದಾಗ ಶ್ರೀಮಾನ ನಾಯಿಕ ವೆಂಕಟರಾಯರು ತಮ್ಮ ಅನೇಕ ಕೆಲಸಗಳನ್ನು ಬದಿಗಿಟ್ಟು ಹೊಸದಾಗಿ ಸಾಹಿತ್ಯ ಪ್ರಪಂಚದಲ್ಲಿ ಕಾಲಿಡುವ ನನಗೆ ಮುನ್ನುಡಿಯನ್ನು ಒದಗಿಸಿಕೊಟ್ಟುದು ಅವರ ಸೌಜನ್ಯವೇ ಸರಿ. ಅವರಿಗೆ ನಾನು ಋಣಿ. ಈಗಿನ ದಿನಗಳಲ್ಲಿ ಯಾವುದಾದರೂ ಕಾರ್ಯವನ್ನು ಕೈಕೊಳ್ಳುವದು ತೊಂದರೆಯದೇ ಆಗಿದೆ. ಅಂತಹದರಲ್ಲಿಯೂ ಲಲಿತ ಮುದ್ರಣಾಲಯದ ಒಡೆಯರು ಮುಂದೆ ಬಂದು ಈ ಹೊತ್ತಿಗೆಯನ್ನು ಮುದ್ದಾಗಿ ಮುದ್ರಿಸಿಕೊಟ್ಟ ಅವರನ್ನೂ ಹಾಗು ಪ್ರಕಾಶಕರನ್ನೂ ನಾನು ಇಲ್ಲಿ ಮರೆಯಲಾರೆ. ನನ್ನ ಗೆಳೆಯರಾದ ಶ್ರೀ ಗದಗಕರ ಹಾಗು ಶ್ರೀ ಹೋಳಿಕಟ್ಟಿಯವರು ಅನೇಕ ಸಲಹೆ ಸೂಚನೆಗಳನ್ನು ಕೊಟ್ಟು ನನಗೆ ಈ ಕಾರ್ಯದಲ್ಲಿ ತುಂಬಾ ನೆರವನ್ನಿತ್ತಿದ್ದಾರೆ. ಅವರಿಗೂ ನಾನು ಉಪಕೃತ.

# ಪರಿವಿಡಿ

## ಯಾರು ಹೊಣೆ ?





# ಬೂಬೂನ ಬಾಳು



ನಮ್ಮೂರು ಚಿಕ್ಕ ಹಳ್ಳಿ. ಹಳ್ಳಿಯೆಂದಕೂಡಲೆ, ಅದಕ್ಕೆ ಬರಬೇಕಾದ ಎಲ್ಲ ವಿಶೇಷಣಗಳೂ ಬರಬೇಕಲ್ಲವೇ ? ಸುತ್ತಲೂ ಹಸುರಾಗಿ ಒಪ್ಪುವ ಹೊಲಗಳು, ನಾಲ್ಕೂಕಡೆಗೆ ಸಾಗಿ ಹೋಗುವ ದಾರಿಗಳು, ಅವುಗಳ ಎಡ ಬಲಕ್ಕೆ ನೀಳವಾಗಿ ನಿಂತುಕೊಂಡ ಹುಣಿಸೆ-ಬೇವಿನ ಮರಗಳು, ಇವೆಲ್ಲ ದೂರ ದಿಂದ ಬರುವವರಿಗೆ ರಮ್ಯವಾಗಿ ಕಾಣುವುವು, ಊರ ಹತ್ತಿರವೇ ಹಾಲು ತುಂಬಿಟ್ಟಂತೆ ಒಪ್ಪುವ ಪುಟ್ಟಕೆರೆ; ಅದರ ದಡದಲ್ಲಿ ದೊಡ್ಡದಾದ ಆಲದ ಮರ; ಅದರ ರೆಂಬೆಗಳು ನೀಳವಾಗಿ ಜೋಕಾಲಿ ಕಟ್ಟಿದಂತೆ ಅಲೆದಾಡುವುವು. ಈ ಕೆರೆಯ ದಂಡೆಯ ಮೇಲಿಂದ ಹಾಯ್ದುಹೋಗಲು, ಗಿಡಗಳ ಗುಂಪಿನಲ್ಲಿ ಅಡಗಿಕೊಂಡು ನಮ್ಮೂರ ಶಾಲೆಯಿದೆ. ತುಸು ದೂರ ಹೋಗಲು, ಮುಂದೆ ಬರುವುದು ರೇಲ್ವೆ ಸ್ಟೇಶನ್ನು. ಬಿಸಿಲುಗಾಲದಲ್ಲಿ ಕೆರೆಯ ನೀರನ್ನು ಕುಡಿದು, ಜನರಿಗೆ ಹಾಯಾಗಿ ಮಲಗಿಕೊಳ್ಳಲು ನೆಳಲು ಕೊಡುವ ಈ ಆಲದ ಮರ ವನ್ನು ಯಾರು ಕೊಂಡಾಡಲಿಕ್ಕಿಲ್ಲ ? ನಾನು ಸಣ್ಣವನಿರುವಾಗಲೇ ಈ ಆಲದ ಮರದ ಪರಿಚಯ ನನಗೆ. ಶಾಲೆಗೆ ಹೋಗುವಾಗ ಅದರಡಿಯಲ್ಲಿಯೆ ಹಾಯ್ದು ಹೋಗುವುದರ—ಶಾಲೆ ತಪ್ಪಿಸಿ ಅದರ ರೆಂಬೆಗಳನ್ನು ಹಿಡಿದು ಉಯ್ಯಾಲೆ ಆಡಿ ಹರ್ಷಪಟ್ಟುದರ—ನೆನಪು, ಈಗಲೂ ನನಗೆ ಮೈಯಲ್ಲಿ ಹುರುಪನ್ನುಂಟು ಮಾಡುವುದು. ಅಷ್ಟೇಕೆ ? ಆ ರೆಂಬೆ ಕೈತಪ್ಪಿ ಬಿದ್ದಾಗ ಮುಖ ಒಡೆದುಕೊಂಡು, ಕೈ ತರೆಸಿಕೊಂಡು ಅಳುತ್ತ ನಿಂತಾಗ "ಬೂಬೂ" ಬಂದು ಎತ್ತಿಕೊಂಡು, ಮೈದಡವಿ ಮುದ್ದಿಟ್ಟು ಮನೆಗೆ ಕರೆದುಕೊಂಡು ಹೋದ ನೆನಪು ಮನದಲ್ಲಿ. ಇಣಿಕಿದಾಗೆಲ್ಲ ನನ್ನ ಮುಖದಲ್ಲಿ ಒಂದು ಹರ್ಷದ ನಗೆಯು ಮಿನುಗುವುದು !

'ಬೂಬೂ' ಎಂದು ಬಾಯಿತುಂಬ ಹೇಳಿಕೊಂಡು ಬಿಟ್ಟೆನೆಂದ ಬಳಿಕ ಅವಳ ವಿಷಯದಲ್ಲಿ ನಿಮಗೆ ತುಸು ಪರಿಚಯ ಮಾಡಿಕೊಡುವ ಅವಶ್ಯಕತೆ

ಎನಿಸುವುದೀಗ. ಬೂಬೂನ ಸಮಾಚಾರ ನನಗೂ ನಿಮ್ಮಂತೆ ಅಲ್ಪವೇ ; ಏಕೆಂದರೆ ನಾನು ಹುಟ್ಟಿ ತಿಳಿವು ಮಾಡುವುದಕ್ಕೆ ಮೊದಲೇ ಅವಳು ನಮ್ಮ ವಠಾರದಲ್ಲಿ ವಾಸಿಸುತ್ತಿದ್ದಳು. ಪೂರ್ವದ ಇತಿಹಾಸ ಮುಸುಕು ಮುಸಕು! ಇತಿಹಾಸವೆಂದ ಕೂಡಲೆ ನೀವು ಬಾಬರ್-ಹುಮಾಯುನರ ಚರಿತ್ರೆಯಂತೆ, ಎಂದು ಕೊಳ್ಳಬಹುದು. ಇತಿಹಾಸ ಬೇಡ, ಸಮಾಚಾರ ಎನ್ನಿರಿ; ತುಸು ನನಗೂ ಹಗುರಾಗುವುದು. ಅಲ್ಲದೆ ಹೇಳಲು ಸರಳವಾಗುವುದು. ಇತಿಹಾಸ ದಲ್ಲಿಯ ವ್ಯಕ್ತಿಗಳ ಚರಿತ್ರೆ ಹೇಳುವಾಗ ತಪ್ಪಿ ನಾನು ಮೊಳಕೈ ಮುರಿಸಿ ಕೊಂಡಿದ್ದೇನೆ, ನಮ್ಮ ಮೇಸ್ಟರಿಂದ ! ಅಕಬರನು ಹುಟ್ಟಿದ ಇಸ್ವಿ ಹೇಳುವ ಬದಲು ನಮ್ಮ ಕರ್ನಾಟಕ ಧುರೀಣನಾದ ಹರಿಹರನ ಇಸ್ವಿ ಹೇಳಿ, ಗಲ್ಲವನ್ನು ಹಿಂಡಿಸಿಕೊಂಡಿದ್ದೇನೆ.

ಈಗ ಹೇಳಿದ್ದೆಲ್ಲವೂ ಹಾಳು ಹರಟೆಯಾಯಿತು. ಇನ್ನು ನಮ್ಮ ಬೂಬೂನ ಸಮಾಚಾರ: ಬೂಬೂ ಯಾವ ಊರವಳೆಂಬದನ್ನು ನಾನರಿಯೆ. ಆದರೆ ಅವಳು ನಮ್ಮೂರಿಗೆ ಬಂದು ಇರಹತ್ತಿದುದು ನಮ್ಮ ತಾಯಿಯವರು ಚಿಕ್ಕವರಿದ್ದಾಗ. ಮಾತಾಡುತ್ತ ಮಾತಾಡುತ್ತ ತಮ್ಮೂರ ಸುದ್ದಿಯನ್ನು ಅವಳು ಒಮ್ಮೊಮ್ಮೆ ಹೇಳುವಳು. ಅಂತೂ ಬುಬೂನಿಗೂ ನಮ್ಮೂರಿಗೂ ಸಂಬಂಧ ಬಹಳ ದಿನಗಳದೆಂದು ಹೇಳಲಿಕ್ಕೆ ಯಾವುದರ ಅಭ್ಯಂತರವಿಲ್ಲ. ಬೂಬೂ ಬಡವಿ; ಗಂಡು ಹೆಣ್ಣು ಯಾವ ಸಂತತಿಯೂ ಇಲ್ಲ. ಗಂಡನನ್ನು ಕಳೆದುಕೊಂಡದ್ದು ಎಂದೋ; ಅವಳಿಗೂ ಮರೆತಿರಬೇಕು ! ಅಂತೂ ಏಕಾಕಿ ಯಾಗಿ ಜೀವಿಸುವ ವ್ಯಕ್ತಿ. ಆದರೂ ಅವಳ ಜೀವನವು ಬಹು ಸೊಗಸಾಗಿರು ವಂತೆ ನಮಗೆನಿಸುತ್ತಿತ್ತು. ನಮ್ಮ ಮನೆಯ ಅಂಗಳದಲ್ಲಿ ಅವಳಿಗೊಂದು ವಾಸಕ್ಕಾಗಿ ಚಿಕ್ಕ ಕೋಣೆಯನ್ನು ಕೊಡಲಾಗಿತ್ತು. ಅವಳ ಜೀವನವನ್ನು ಸಾಗಿಸಲಿಕ್ಕೆ, ಮಕ್ಕಳಂತಿರುವ ನಾಲ್ಕಾರು ಮೇಕೆಗಳು. ಮುಂಜಾವಿನಲ್ಲಿ ಎದ್ದು ಹೊರಟಳೆಂದರೆ ಸಂಜೆಗೆ ಮನೆಗೆ ಬರುವ ರೂಢಿ. ಮನೆಗೆ ಬರುವಾಗ ತಲೆಯಮೇಲೆ ಹುಲ್ಲ ಹೊರೆ ಅಥವಾ ಕಟ್ಟಿಗೆಯ ಹೊರೆ ತರುವಳು. ಒಂದೊಂದು ದಿನ ಬೇಸರವಾದಾಗ ಅಡವಿಗೆ ಹೋಗುವುದನ್ನು ಬಿಡುವಳು. ವರ್ಷಕ್ಕೊಮ್ಮೆ ಬರುವ ಮೋಹರಮ್ ಹಬ್ಬದಲ್ಲಿ ಬೂಬೂನ ಉತ್ಸಾಹ ನೋಡುವಂತಹದು. ಇದ್ದ ತನ್ನ ಹಸಿರು ಸೀರೆಯನ್ನು ಉಟ್ಟು, ಯಾರ

ಸಣ್ಣ ಮಕ್ಕಳನ್ನಾದರೂ ಎತ್ತಿಕೊಂಡು ಉತ್ಸವ ನೋಡಲು ಹೋಗುವಳು. ನಾನೇ ಆವಳ ಬಗಲಲ್ಲಿ ಕುಳಿತು ಎಷ್ಟೋಸಲ ಆಟ ನೋಟಗಳನ್ನು ನೋಡು ವದಕ್ಕೆ ಹೋಗಿದ್ದೇನೆ. ಆದರೂ ಆಕೆ ಸ್ವತಂತ್ರ ಜೀವಿ ! ಒಬ್ಬರ ಹಂಗೂ ಆವಳಿಗೆ ಬೇಡ. ಹೀಗೆ ಆವಳ ಜೀವನ ಏರು ಇಳಿತವಿಲ್ಲದೆ ಸಾಗುತ್ತಿತ್ತು. ಸಂಜೆಗೆ ಬೆಳದಿಂಗಳ ದಿನಗಳಲ್ಲಿ ಕಟ್ಟೆಯ ಮೇಲೆ ಕುಳಿತು ರೊಟ್ಟಿ ತಿನ್ನುತ್ತ ಹರಟುವಳು. ಆವಳ ಹರಟೆಯಲ್ಲಿ, ತನ್ನ ಬಾಳನ್ನು ಕುರಿತು ಯಾವ ವಿಚಾರ ಗಳೂ ಹೊರಹೊಮ್ಮುತ್ತಿರಲಿಲ್ಲ.

ನಾನು ದೊಡ್ಡವನಾದಂತೆ ಬೂಬೂನಿಗೂ ನನಗೂ ಸಂಬಂಧ ತಪ್ಪ ತೊಡಗಿತು. ಏಕೆಂದರೆ ನಾನು ಕಲಿತು ದೊಡ್ಡವನಾಗಿ ನೌಕರನಾಗ ಬೇಕಾಗಿದ್ದಿತು ! ಬೂಬೂನ ಸಂಗಡ ರಾತ್ರಿ ಬೆಳದಿಂಗಳಲ್ಲಿ ಹರಟುತ್ತ ಕುಳಿತುಕೊಂಡರೆ ನನ್ನ ಅಭ್ಯಾಸ ಸಿಲ್ಲುವದಲ್ಲ ! ನನ್ನ ತಾಯಿ ಕೂಗಿಕೊಂಡು ನನ್ನನ್ನು ಓದುವುದಕ್ಕೆ ಕುಳ್ಳಿರುಸುತ್ತಿದ್ದರು. ನಾನು ಹೇಗೋ ಕಸವಿಸಿ ಗೊಳ್ಳುತ್ತ ಅಕಬರನ ಇತಿಹಾಸವನ್ನೊ, ಧಾರವಾಡ ಜಿಲ್ಲೆಯ ಭೂಗೋಲ ವನ್ನೋ ಓದುತ್ತಿದ್ದೆ. ಆದರೆ ಬೂಬೂ, ನನ್ನ ತಾಯಿ, ಇನ್ನುಳಿದ ಹೆಂಗಳೆ ಯರು ಒಳ್ಳೇ ಸವಿಯಾಗಿ ಹೊರಗ ಹರಟೆ ಹೊಡೆಯುತ್ತಿರುವ ಧ್ವನಿ ನನಗೆ ಒಳಗೆ ಕೇಳಿಸುವುದು, ' ನನಗೆ ಅದನ್ನು ಕೇಳುವ ಪುಣ್ಯವಿಲ್ಲವಲ್ಲ ! ' ಎಂದು ನನ್ನ ಎಳೆಯ ಮನಸ್ಸು ಆಗ ನೋಯುವುದು. ಆದರೂ ಹೊರಗೆ ಬರುವಂತಿ ರಲಿಲ್ಲ—ಕಾರಣ ನನ್ನ ಅಭ್ಯಾಸ !

ನಾನು ಮೊದಲೇ ಹೇಳಿದ್ದೆನಲ್ಲ—ನಮ್ಮೂರು ಹಳ್ಳಿಯೆಂದು. ಹಳ್ಳಿ ಯಲ್ಲಿ ಕತ್ತಲು ದಿನಗಳಲ್ಲಿ ಬೀದಿ ದೀಪಗಳನ್ನು ಹಚ್ಚುವವರಾರು ? ಮೇಲೆ ಪ್ರತಿಯೊಬ್ಬರ ಮನೆಯ ಮುಂದೆ ಸಿಂಹದಂತಹ ನಾಯಿಗಳು ಬೇರೆ! ಗುರು ತಿಲ್ಲದ ಜನ ಅಡ್ಡಾಡುವುದೇ ತೊಂದರೆ. ಕತ್ತಲೆ ಮುತ್ತಿದ್ದರೂ ನಕ್ಷತ್ರಗಳ ಬೆಳಕನ್ನು ನೋಡುತ್ತ ತಾಯಿ-ಅಕ್ಕನ ಜೊತೆಗೆ, ಕಟ್ಟೆಯಮೇಲೆ ಏನನ್ನೋ ಮಾತನಾಡುತ್ತ ಕುಳಿತುಕೊಂಡಿದ್ದೆ. ಆಗ ನನಗೆ ಬಿಡುವಿನ ದಿನ. ಆದರಲ್ಲಿ ಕನ್ನಡ ನಾಲ್ಕನೆಯ ಈಯತ್ತೆ ಪಾಸಾಗಿದ್ದೇನೆ ! ಎಂದ ಬಳಿಕ ನನ್ನನ್ನು ಕೇಳುವವರಾರು? ಮನೆಯಲ್ಲಿ ಇಂಗ್ಲೀಷು ಶಾಲೆಗೆ ಕಳಿಸುವ ವಿಚಾರ ತುಂಬ

ರಭಸದಿಂದ ನಡೆದಿತ್ತು. ಅಂದು ಯಾಕೋ ಬೂಬೂ ಇನ್ನೂ ಮನೆಗೆ ಬಂದಿರ ಲಿಲ್ಲ. ತಾಯಿ ನುಡಿದರು: “ ಯಾಕೋ ಬೂಬೂ ಇನ್ನೂ ಬರಲಿಲ್ಲ ಮನೆಗೆ; ಕತ್ತಲೆಯ ದಿವಸ !” ಎಂದು ಉದ್ಗಾರ ತೆಗೆಯುವದರಲ್ಲಿಯೇ ಬುಬೂನ ಮೇಕೆಗಳು ಅಂಗಳವನ್ನು ಸೇರಿದುವು. ಬೂಬೂ ಬಹಳ ರಸಿಕಳು. ತಲೆಯ ಮೇಲಿನ ಹೊರೆ ಚೆಲ್ಲಿ, ಮೇಕೆಗಳನ್ನು ಕಟ್ಟಿ ನನ್ನ ಹತ್ತಿರ ಬಂದವಳೇ ಉಡಿ ಯಲ್ಲಿ ಕಟ್ಟಿಕೊಂಡಿದ್ದ ನಾಲ್ಕುಎಳೆಯ ಸವತೀಕಾಯಿಕೊಟ್ಟು “ಯಾರಿಗೂ ಕೊಡಬೇಡ, ನೀನೇ ತಿನ್ನು ! ” ಎಂದಳು. ನನಗೆ ಆಗ ಆದ ಹಿಗ್ಗನ್ನು ಎಷ್ಟು ಹೇಳಿದರೂ ಸಾಲದು. ಆ ನೆನಹು ಬೂಬೂನ ವ್ಯಕ್ತಿತ್ವ ಚಿತ್ರಿಸಲು ಈಗಲೂ ಯಾವಾಗಲೂ ಸಹಾಯ ಮಾಡುವಂತಹದು. ಮಕ್ಕಳ ಮೇಲೆ ಬೂಬೂ ಬಹಳ ಲೋಭಿ ! ಒಂದು ದಿನ ರಾತ್ರಿ ನಾವೆಲ್ಲರೂ ಹೊರಗೆ ಕುಳಿತಿದ್ದೆವು. ಕತ್ತಲು ದಟ್ಟವಾಗಿತ್ತು. ಬೂಬೂ ಹಿಂದಿನ ದಿನಗಳ ರಮ್ಯನಿಮಿಷಗಳನ್ನು ಎತ್ತಿಕೊಂಡು ಬಹು ಸವಿಯಾಗಿ ಹರಟುತ್ತಿದ್ದಳು. ಒಮ್ಮೆಲೇ ನಾಯಿ “ ಗುರ್ ಗುರ್ ” ಎಂದಿತು. ಬೂಬೂ ಓಡಿಹೋಗಿ “ ಯಾರವರು ? ” ಎಂದು ಕೂಗಿ ಕೊಂಡಳು. ಮತ್ತೆ ತಾನೇ ಒಳ್ಳೇ ಹರ್ಷದ ಧ್ವನಿಯಿಂದ “ ನಿನ್ನ ಅಣ್ಣಾ ಬಂದ ! ಎಂದು ಹಿಗ್ಗಿನಿಂದ, ನನ್ನ ಅಣ್ಣನ ಬ್ಯಾಗು ಮೊದ ಲಾದ ಸಾಮಾನುಗಳನ್ನು ಎತ್ತಿಕೊಂಡು ಬಂದಳು. ಎಂತಹ ಪ್ರಸಂಗವೇ ಬರಲಿ, ಬೂಬೂ ಹೆರವರ ಸುಖ ದುಃಖಗಳಲ್ಲಿ ಕೂಡಲೆ ಬೆರೆತು ಬಿಡವಳು. ಓಣಿಯ ಮಕ್ಕಳಂತೂ ಅವಳನ್ನು ಕಂಡರೆ ಪಂಚಪ್ರಾಣ ! ನಮ್ಮ ಹಳ್ಳಿಯ ಹೆಣ್ಣುಮಕ್ಕಳಿಗೆ ಕೆಲಸ ಬಹಳ. ತಮ್ಮ ಕೆಲಸದ ಗಡಿಬಿಡಿಯಲ್ಲಿ ಮಕ್ಕಳ ಯೋಗ ಕ್ಷೇಮ ಕೂಡ ಮರೆಯುತ್ತಾರೆ. ಮಕ್ಕಳನ್ನು ಅಳಿಸುತ್ತಾರೆ. ಆದರೆ ಬೂಬೂ, ಯಾವ ಮಕ್ಕಳೇ ಅಳುತ್ತಿರಲಿ—ಕೂಡಲೇ ಹೋಗಿ ಸಮಾಧಾನ ಮಾಡುವಳು. ಅದರ ಹಿಡಿತ ಅವಳಿಗೆ ಗೊತ್ತು. ಅಳುವ ಹುಡುಗರು ನಗ ಹತ್ತುವುವು—ಅವಳ ಆ ಮಾಟಕ್ಕೆ !

ಬೂಬೂ ಹೆಣ್ಣು ಹುಡಿಗಿಯರ ಮೇಲೆ ಬಹಳ ಮಮತೆ ಮಾಡುತ್ತಿ ದ್ದಳು. ಹಿಂದಕ್ಕೆ ಒಂದು ಸಂಗತಿ ಜರುಗಿತು: ನಮ್ಮ ಹಿತ್ತಲಮನೆ ಈರಪ್ಪ ತನ್ನ ಮಗಳನ್ನು ಗಂಡನ ಮನೆಗೆ ಕಳಿಸದೆ ಕುಳಿತುಕೊಂಡಿದ್ದ. ಅದಕ್ಕೆ ಕಾರಣ ದುಡ್ಡಿನ ಕೊರತೆಯೇ ಇರಬೇಕು. ಬೂಬೂ ಇದನ್ನು ತಿಳಿದು

ಕೊಂಡಳು. ಹೇಗಾದರೂ ಗಂಗವ್ವನನ್ನು ಗಂಡನ ಮನೆಗೆ ಕಳಿಸಬೇಕೆಂದು ಹಂಚಿಕೆ ಹಾಕಿ, ಕೊನೆಗೆ ಆ ಸಲ ಸುಗ್ಗಿಯಲ್ಲಿ ದುಡಿದು, ಗಂಗವ್ವನಿಗಾಗಿ ತಾನೇ ಒಂದು ಹಸಿರು ಸೀರೆ ತಂದು, ಈರಪ್ಪನಿಗೆ ಏನೋ ಬುದ್ಧಿ ಹೇಳಿ, ಗಂಗವ್ವನನ್ನು ಕರೆದುಕೊಂಡು ಹೋಗಿ ಬಿಟ್ಟು ಬಂದಳು. ಗಂಗವ್ವ ಈಗ ಎರಡು ಮಕ್ಕಳ ತಾಯಿ. ಆಕೆ ಮೊನ್ನೆ ನಮ್ಮೂರಿಗೆ ಬಂದಾಗ, ಬೂಬೂ ನನ್ನು ಹೊಗಳಿ ಏನನ್ನೋ ಕೊಡಹೋದರೆ, ಬೂಬೂ ಅವಳ ಬಾಯಿಮುಚ್ಚಿ ಅಲ್ಲಿಂದ ಎದ್ದು ಹೋದಳು. ಯಾರ ಮನೆಯಲ್ಲಾಗಲಿ ಕೇಡಾದರೆ ತಾನೇ ಓಡಿ ಹೋಗಿ, ತನ್ನ ಮೈ ಕೈಗಳ ಎಚ್ಚರಿಕೆ ಇಲ್ಲದೆ ದುಡಿಯುವಳು. ಬಣ ಜಿಗರ ಶಿವಪ್ಪನ ಹೆಂಡತಿ, ಎರಡು ಮಕ್ಕಳನ್ನು ಬಿಟ್ಟು ತೀರಿಕೊಂಡಳು. ಬೂಬೂ ಅಂದು ಅತ್ತು ಅತ್ತು ಹಣ್ಣಾಗಿ, ಕೊನೆಗೆ ಆ ಮಕ್ಕಳನ್ನು ಕರೆದು ಕೊಂಡು ಮನೆಗೆ ಬಂದಳು. ತನ್ನ ಮಕ್ಕಳ ಹಾಗೆ ಜೋಪಾನ ಮಾಡಿದ್ದಾಳೆ. ಆ ಹುಡುಗರು ಅವಳನ್ನು ' ಅವ್ವಾ ' ಎಂದು ಕೂಗುತ್ತವೆ !

ಜಾತ್ರೆಯ ದಿನಗಳಲ್ಲಿ ಸಣ್ಣ ಸಣ್ಣ ಹುಡುಗರನ್ನು ಕೂಡಹಾಕಿ ಹಾಡು ಹೇಳುವುದು, ತನ್ನ ಮನೆಯಲ್ಲಿಯ ತಿನಿಸನ್ನು ಮಕ್ಕಳಿಗೆ ಹಂಚುವುದು—ಹೀಗೆ ಏನನ್ನಾದರೂ ಮೋಜಿನ ಸಂಗತಿ ಬೂಬೂ ಮಾಡುತ್ತಲೇ ಇರುತ್ತಿದ್ದಳು

*    *    *    *

ಅಂದು ರಾತ್ರಿ ನನ್ನನ್ನು ಇಂಗ್ಲಿಷ್ ಶಾಲೆಗೆ ಕಳಿಸುವುದನ್ನು ನಿಶ್ಚಯ ಮಾಡಿದರು. ನಾನು ಎರಡು ಮೂರು ದಿನಗಳಲ್ಲಿ ಧಾರವಾಡಕ್ಕೆ ಹೋಗು ವವ. ಮರುದಿವಸದಿಂದ ಬೂಬೂ ಬಹಳ ಸಣ್ಣ ಮೋರೆ ಮಾಡಿಕೊಂಡು ಅಡ್ಡಾಡಹತ್ತಿದಳು. ಆದರೆ ನನಗೆ ಅವಳ ಒಳನೋವು ಆಗ ತಿಳಿಯಲಿಲ್ಲ. ನಾನು ಹೊರಡುವ ದಿನ ಅವಳು ನಸುಕಿನಲ್ಲಿಯೆ ಅಡವಿಗೆ ಹೋಗಿ ಬಿಟ್ಟಿದ್ದಳು. ಯಾಕೋ, ದೇವರೇ ಬಲ್ಲ ! ಮುಂದೆ ವರುಷಕ್ಕೆ ಒಮ್ಮೆ ಅಥವಾ ಎರಡು ಸಲ ಹಳ್ಳಿಗೆ ಹೋಗುವ ರೂಢಿ ನನ್ನದಾಯಿತು. ಬರಬರುತ್ತಾ ಹಳ್ಳಿಯ ಜೀವನ ಸೇರದಾಯಿತು. ಬೂಬೂನ ನೆನಹು ನನಗೆಲ್ಲಿ ? ಹಳ್ಳಿಗೆ ಹೋದಾಗ ಬೂಬೂ ಬಂದು ನನ್ನನ್ನು ಮಾತನಾಡಿಸುವಳು. ಆದರೆ ನಾನು ಹಿಂದೆ ಕೇಳಿದಾಗ ಅನೇಕ ರಮ್ಯ ಕಥೆಗಳನ್ನು ಅವಳು ಹೇಳುತ್ತಿದ್ದಳು; ಈಗ

ನನಗೆ ಕಥೆ ಕೇಳುವ ಹವ್ಯಾಸವೇ ಉಳಿದಿರಲಿಲ್ಲ. ಮೇಲಾಗಿ ನಾನು ಈಗ ಕಲಿತು ಸುಧಾರಿಸಿದವ ಬೇರೆ ! ಅವಳ ಒಗ್ಗೆ ನಾನೀಗ ಅಷ್ಟು ಆಸಕ್ತಿಯನ್ನು ತೋರಿಸುತ್ತಿರಲಿಲ್ಲ. ಬೂಬೂ ನಿತ್ಯ ತೃಪ್ತಿ ಹೊಂದಿದವಳು. ನನ್ನ ಜೀವನದಲ್ಲಿ ಅನೇಕ ಮಾರ್ಪಾಡುಗಳು ಆದಂತೆ, ಅವಳ ಜೀವನದಲ್ಲಿ ಯಾವ ಬದಲಾವಣೆ ಗಳೂ ಆಗಿರಲಿಲ್ಲ. ತುಸು ಬಡಕಲಾಗಿದ್ದಳು ಮಾತ್ರ !

ಕಾಲವು ಯಾರಿಗೂ ಅರಿವು ಇರದಂತೆ ಜಾರಿ ಹೋಗುತ್ತದೆ. ನಾನು ಜೂನಿಯರ್ ಬಿ. ಎ. ತರಗತಿಯಲ್ಲಿ ಓದುತ್ತಿದ್ದೆ. ಪರೀಕ್ಷೆಯ ಗದ್ದಲವಂತೂ ಇರಲಿಲ್ಲ. ಹಾಗೂ ಹೀಗೂ ಮಾಡಿ ಪರೀಕ್ಷೆಯ ಕಾಟ ತೀರಿಸಿಕೊಂಡು ಊರಿಗೆ ಹೊರಟೆ. ನಾನು ಊರಿಗೆ ಹೋಗುವಾಗ ರಾತ್ರಿಯ ಗಾಡಿಯನ್ನು ಹಿಡಿಯುತ್ತಿದ್ದೆ. ಅಂದು ಕೂಡ ರಾತ್ರಿಯ ಗಾಡಿಗೇ ಹೊರಟೆ. ನಮ್ಮೂರಿಗೆ ಗಾಡಿ ಸರಿಯಾಗಿ ಹತ್ತು ಗಂಟೆಗೆ ತಲುಪಿತು. ಕಗ್ಗತ್ತಲು ಸುತ್ತಿತ್ತು. ಗಾಡಿ ಯಿಂದ ಇಳಿದವರೇ ಕೆಲವು ಜನ. ಕಗ್ಗತ್ತಲೆಯಲ್ಲಿ ಎಡಹುತ್ತ, ನಾಯಿಗಳ ಬೊಗಳಾಟಕ್ಕೆ ಮನದಲ್ಲಿಯೇ ಅಂಜುತ್ತ, ಮನೆಯನ್ನು ಸಮೀಪಿಸಿದೆ. ಮನೆಯ ಮುಂದೆ ದೀಪದ ಬೆಳಕು ಕಂಡು ತುಸು ಮನಕ್ಕೆ ಹಗುರೆನಿಸಿತು. ತಾಯಿ, ಅಕ್ಕ ನನ್ನನ್ನು ಅಕ್ಕರೆಯಿಂದ ಬರಮಾಡಿಕೊಂಡರು. ಕೂಡಲೆ ಊಟದ ಸಿದ್ಧತೆ ನಡೆಯಿತು. ನನ್ನನ್ನು ಅನೇಕ ವಿಷಯದ ಬಗ್ಗೆ ಕೇಳಿದರು. ಆಗ ಬೂಬೂನ ವ್ಯಕ್ತಿ ಮಾತ್ರ ನಡುವೆ ಇರಲಿಲ್ಲ ! ಇರಬೇಕಾದವಳು. ನಾನು ಒಮ್ಮೆಲೇ ಅವಳ ಕೋಣೆಯ ಕಡೆಗೆ ನೋಡಿದೆ; ಬಾಗಿಲು ಇಕ್ಕಿತ್ತು. ನಮ್ಮ ತಾಯಿಯವರನ್ನು ಕೇಳಿದೆ: “ ಬೂಬೂ ಎಲ್ಲಿದ್ದಾಳೆ ?” ಎಂದು. ತಾಯಿ ದೀರ್ಘವಾಗಿ ಉಸಿರನ್ನೊಂದು ಬಿಟ್ಟು “ ಬೂಬೂ ಹೋಗಿ ಹಳೆಯ ಮಾತಾಯಿತು ” ಎಂದರು. ಅವರ ಕಣ್ಣಲ್ಲಿ ಹನಿ ಕಂಡಿತು ! ಈ ಮಾತು ಹೊರಡಬೇಕಾದರೆ ಅವರ ಹೃದಯ ತುಂಬಿ ಬಂದಿತ್ತು. ಬೂಬೂ ಅವರ ಬಾಳಿನುದ್ದಕ್ಕೂ ಗೆಳತಿಯಂತೆ ಬಾಳಿಹೋದಳು. ನನಗೂ ಸಹ ಒಮ್ಮೆಲೇ ಕೈಯಲ್ಲಿಯ ವಸ್ತುವನ್ನು ಕಳೆದುಕೊಂಡು ಹುಡುಕುವ ಮನುಷ್ಯನ ಗತಿ ಯುಂಟಾಯಿತು. ಆಗ ತಾಯಿ ಸಮಾಧಾನವಾಗಿ ಹೇಳಿದರು: “ ಅವಳು ಸತ್ತಾಗ ನೆರೆದಷ್ಟು ಜನವನ್ನು ಇನ್ನಾವಾಗಲೂ ನಾನು ನೋಡಲಿಲ್ಲ. ಎಲ್ಲರೂ ಬೂಬೂನನ್ನು ನೆನಸಿ ಹಾಡಿ ಅಳುವವರೇ, ಬಹಳ ಗುಣವಂತಿ ! ನಮ್ಮ

ವತಾರದಲ್ಲಿ ಇಪ್ಪತ್ತೆರಡು ವರುಷ ಇದ್ದರೂ, ಒಬ್ಬರಿಗೂ ಬೇಡವಾಗಿರಲಿಲ್ಲ. ಪ್ರತಿಯೊಬ್ಬರ ಸುಖ-ದುಃಖಗಳಲ್ಲಿ ಕಲೆತು ಒಂದಾಗುವವಳು" ಎಂದು ಅವರು ಹೇಳುತ್ತಿರುವಾಗಲೇ, ನಾನು ಕುತೂಹಲದಿಂದ "ಅವಳ ಊರು ಯಾವುದು? ಗಂಡ ಇದ್ದಿಲ್ಲವೇ ಅವಳಿಗೆ?" ಎಂದೆ. ಬಹಳ ದಿನಗಳಿಂದಲೂ ಕೇಳಬೇಕೆನಿಸಿದ ಪ್ರಶ್ನೆ. ನಮ್ಮ ತಾಯಿಗೆ ಅವಳು ಹೇಳಿದ ಸಂಗತಿಯ ಸಾರಾಂಶ ಹೀಗಂತೆ: ಅವಳಿಗೆ ತಿಳಿವು ಬರುವವೊದಲು ಅವಳ ತಂದೆ ತಾಯಿ ತೀರಿದ್ದರಂತೆ! ಅವಳು ಹನ್ನೆರಡು ವರುಷದವಳಾದಾಗ, ಅವಳ ಅಜ್ಜಿ ಅವಳನ್ನು ಒಬ್ಬನಿಗೆ ಕೊಟ್ಟು ಮದುವೆ ಮಾಡಿದಳು. ಗಂಡ ತೀರಿದ; ಯಾವುದೂ ಜೀವಕ್ಕೆ ಸೊಗಸೆನಿಸಲಿಲ್ಲ. ಸುಗ್ಗಿಯ ಜನರ ಗುಂಪಿನಲ್ಲಿ ಸೇರಿ ಇಲ್ಲಿಗೆ ಬಂದು ಜೀವಿಸಿದವಳಂತೆ. ಮಾಡಿಕೊಂಡಿದ್ದರೆ ಮತ್ತೊಂದು ಮದುವೆ ಮಾಡಿಕೊಳ್ಳಬಹುದಾಗಿತ್ತು. ಆದರೂ ಬಾಬೂ ಅದನ್ನು ಒಪ್ಪಲಿಲ್ಲವೇಕೊ! ನಾನು ಮೂರು ವರುಷದವನಿದ್ದನಂತೆ! ಅವಳು ನನ್ನನ್ನು ಎತ್ತಿ ಆಡಿಸಿ ಹರ್ಷಬಡುತ್ತಿದ್ದಳಂತೆ. ತಾನು ತೀರುವ ವೊದಲು ಆಕೆ ನನ್ನ ಮದುವೆಯ ಬಗ್ಗೆ ಮೇಲಿಂದ ಮೇಲೆ ಕೇಳುತ್ತಿದ್ದಳೆಂದು ತಾಯಿ ಹೇಳುತ್ತಿರುವಾಗಲೇ—ತನ್ನದೆನ್ನುವುದೇನೂ ಇಲ್ಲದಿದ್ದರೂ ಎಲ್ಲವೂ ತನ್ನದೆಂದು ದುಡಿದು, ಬಾಳಿ, ಎಲ್ಲಿಯೋ ಹುಟ್ಟಿ, ಎಲ್ಲಿಯೋ ತೀರಿಹೋದ ಅವಳ ಬಗ್ಗೆ ಕನಿಕರ ಹುಟ್ಟಿ—ನಾನು ಒಂದು ಬಿಸಿಯುಸಿರನ್ನು ವಾತಾವರಣದಲ್ಲಿ ಒಂದು ಗೂಡಿಸಿದೆ.

---

# ಮೌನವು ಮುದ್ದಿಗಾಗಿ!



ಮೋಹನರಾಯರು ರಗ್ಗಿನ ಮುಸಕು ತೆಗೆದು ಸುತ್ತಲೂ ನೋಡಲು ಇನ್ನೂ ಎಲ್ಲವೂ ಶಾಂತವಾಗಿಯೇ ಇದ್ದಿತು. ಬೆಳಗಿನ ಜಾವವು ಜಾರಿ, ಸೂರ್ಯನು ಮೇಲಕ್ಕೇರಿದುದು ಅವರಿಗೆ ಅರಿವೇ ಇರಲಿಲ್ಲ. ಅಷ್ಟು ಗಾಢವಾಗಿ ನಿದ್ರೆ ಗೈದಿದ್ದರು. ಬದಿಯಲ್ಲಿಯೇ Bed Lamp ತನ್ನ ಕರ್ತವ್ಯ ವನ್ನು ಇನ್ನೂ ಮಾಡುತ್ತಿರುವೆನೆಂದು ಶಾಂತವಾಗಿ ಉರಿಯುತ್ತಲಿತ್ತು. ಕಾಲವು ಮಳೆಗಾಲವಾದ್ದರಿಂದ, ತಂಪು ತಗಲಬಾರದೆಂದು ಕಿಟಕಿಗಳೆಲ್ಲ ವನ್ನೂ ಇಕ್ಕಿದ್ದರು. ಹಂಚಿನ ಮೇಲೆ ಮಳೆಹನಿಗಳು ಬೀಳುತ್ತ ತೊಟತೊಟನೆ ಸಪ್ಪಳವಾಗುತ್ತಲಿತ್ತು. Black Board ದ ಮೇಲೆ ಖಡುವಿನಿಂದ ಉದ್ದ ಗೆರೆಗಳನ್ನೆಳೆದಂತೆ ಕಿಟಕಿ, ಬಾಗಿಲುಗಳ ಬಿರುಕುಗಳಿಂದ ಬೆಳಕು ಬಿದ್ದಿತ್ತು. ಮೋಹನರಾಯರು ತಮ್ಮ ಎದುರಿನಲ್ಲಿ "ಟಿಕ್ ಟಿಕ್" ಸಪ್ಪಳ ಮಾಡುತ್ತ ಗೂಟಕ್ಕೆ ತೂಗು ಬಿಟ್ಟದ್ದ ಗಡಿಯಾರದ ಕಡೆಗೆ ದೃಷ್ಟಿ ಹರಿಸಿದರು: ಆಗ ೮|| ಗಂಟೆಯಾಗಿದ್ದಿತು!

ಇತ್ತ ಮತ್ತೊಂದೆಡೆಗೆ ತಮ್ಮ ಗೃಹಿಣಿ ಇನ್ನೂ ಮುಸುಕು ಹಾಕಿ ದೀರ್ಘ ವಾಗಿ ಉಸುರೆಳೆಯುತ್ತ ಮಲಗಿದ್ದನ್ನು ಕಂಡರು. ಪಕ್ಕದಲ್ಲಿಯೇ ಮಗುವು "ಮುಸ್—ಮುಸ್" ಎನ್ನುತ್ತ ತಾಯಿಯನ್ನಪ್ಪಿಕೊಂಡಿದ್ದಿತು!

ಮೋಹನರಾಯರು ಆಫೀಸಿಗೆ ೧೧॥ ಗಂಟೆಗೆ ಪ್ರತಿನಿತ್ಯವೂ ಹೋಗು ವವರು. ಸುಂದರೆಯು ಬೆಳಗಿನಲ್ಲಿಯೇ ಎದ್ದು ಎಲ್ಲ ಕೆಲಸಗಳನ್ನು ಮುಗಿಸಿ, ಹೊಸ್ತಿಲಿಗೆ ರಂಗವಲ್ಲಿಯನ್ನಿಕ್ಕಿ ಕಿರುದನಿಯಲ್ಲಿ "ಏಳು ನಾರಾಯಣಾ ಏಳು ಲಕ್ಷ್ಮೀರಮಣ" ಎಂದು ಉದಯರಾಗವನ್ನು ಅನ್ನುತ್ತ "ಸ್ಟೋ" ಹೊತ್ತಿ ಸುವ ವೇಳೆ ದಾಟಿಹೋಗಿದ್ದಿತು. ಮೋಹನರಾಯರ ಮನಸ್ಸನ್ನು ಸಿಟ್ಟು ಮತ್ತು ಸಂಶಯಗಳೆರಡೂ ಅಂಟಿಕೊಂಡವು. ಗಾಳಿಯು ಹಂಚುಗಳ ಸಂದಿ ನೊಳಗಿಂದ ಸುಯ್ಯ್ ಎಂದು ಬೀಸಿತು. ಮೋಹನರಾಯರೂ ತಾವೂ

ಮುಸುಕು ಎಳೆದುಬಿಡಬೇಕೆಂದಿದ್ದರು. ಆದರೆ ಆಫೀಸ್ ? ದಾಸ್ಯವೃತ್ತಿ! ಏನಾದರೂ ಬಿಟ್ಟಿದ್ದಲ್ಲವಲ್ಲಾ ಆಫೀಸಿಗೆ ಹೋಗುವದು. ಸಾವಕಾಶವಾಗಿ ತಾವೇ ಎದ್ದು ನಡುಮನೆಗೆ ಹೋದರು. ಸಪ್ಪಳ ಮಾಡುತ್ತ ಕಿಟಕಿ ತೆಗೆದರು ತಮ್ಮ ಹೆಂಡತಿಯು ಏಳಬೇಕೆಂದು.ಆದರೆ ಗಾಢನಿದ್ರೆಗೈಯುತ್ತಿದ್ದ ಸುಂದರೆಗೆ ಎಚ್ಚರವೇ ಆಗಲಿಲ್ಲ. ಮೋಹನರಾಯರ ಕೋಪವು ಇಮ್ಮಡಿಸಿತು. ಮೋರೆ ತೊಳೆದುಕೊಂಡು ತಾವೇ “ಸ್ಟೋ” ಹೊತ್ತಿಸಿ ಚಹಾ ಮಾಡಿಟ್ಟರು. ಆದರೂ ಸುಂದರಿಯು ಇನ್ನೂ ಏಳಲಿಲ್ಲ. ರಾಯರು ಬಸಿಯನ್ನೆತ್ತಿ ಚಹ ಕುಡಿಯಲು ಪ್ರಾರಂಭಿಸಿದರು. ಅಷ್ಟುಹೊತ್ತಿಗೆ ಸುಂದರೆಯು ಎದ್ದು ಮೋರೆ ಮೇಲೆ ಬಿದ್ದ ಕೂದಲುಗಳನ್ನು ಸರಿಮಾಡಿಕೊಳ್ಳುತ್ತಾ ಬಚ್ಚಲಮನೆಯನ್ನು ಸೇರಿದಳು. ಮೋಹನರಾಯರು ‘ಕೆಟ್ಲೆಯಲ್ಲಿ ಅರ್ಧಾಂಗಿಗೆ ಚಹವನ್ನಿರಿಸಿ ತಮ್ಮ ಆಫೀಸ್ ರೂಮಿಗೆ ಹೋದರು. ಅದೇನೋ ಮಾಡಬೇಕಾಗಿದ್ದ ಕೆಲಸವು ಸಾಕಷ್ಟಿತ್ತು! ಆದರೆ ಕೆಲಸಮಾಡುವ ಹುರುಪು ಮೈಯಲ್ಲಿ ಇರಲಿಲ್ಲ. ಆದೇಕೆ ? ನಗೆಮೊಗದಿಂದ ನಲಿದು ಚಹ ಕೊಡುವ ಅರ್ಧಾಂಗಿಯು ಏಳುವದು ಹೊತ್ತಾದುದಕ್ಕೆ ರಾಯರಿಗೆ ಅಷ್ಟೊಂದು ಸೊಗಸೆನಿಸಲಿಲ್ಲ! ‘ಟೇಬಲ್ಲಿನ ಮೇಲಿನ ‘ಫೈಲು’ ಗಳನ್ನೆಲ್ಲ ತಿರುವಿಹಾಕಿದರೂ, ಒಂದನ್ನೂ ಪೂರ್ಣ ಮುಗಿಸಲಿಲ್ಲ. ಸಾಕಾಯಿತು ಅವರಿಗೆ ಕೆಲಸ ಮಾಡುವದು. ‘ಡ್ರಾ’ ತೆರೆದು ಒಂದು ಸಿಗರೇಟನ್ನು ಹೊರತೆಗೆದರು. ಕಡ್ಡಿ ಕೆರೆದು ಹೊತ್ತಿಸಿದರೇನೋ ನಿಜ, ಅವರ ಮನಸ್ಸೆಲ್ಲಿದ್ದಿತೋ ಬಲ್ಲವರಾರು ? ಬಿಳಿ ಬತ್ತಿ ತಾನೆ ಸುಡಲಾರದೆ ಸುಟ್ಟು ಬೂದಿಯಾಯಿತು.

ರಾಯರು ಎದ್ದು ಕಿಟಕಿಯಲ್ಲಿ ಮೋರೆ ಹಾಕಿ ನೋಡಿದರು. ಬೀದಿಯಲ್ಲಿ ಮಳೆ ಧಾರೆಗಟ್ಟಿ ಸುರಿಯುತ್ತಲಿತ್ತು. ಜನರು ತಮ್ಮ ಧೋತರಗಳನ್ನು ಮೇಲಕ್ಕೇರಿಸಿ, ಛತ್ರಿಗಳ ಚಾಟಿನಲ್ಲಿ ನಡೆದಿದ್ದರು. ಇಷ್ಟರಲ್ಲಿಯೇ ಬದಿಯ ಬೀದಿಯಿಂದ ರಾಯರ ಗೆಳೆಯ ವೆಂಕಟರಾಯರು Over-coat ಹಾಕಿಕೊಂಡು ಬಂದು ಕೂಗಿದರು. “ಏನು ಮೋಹನರಾವ್—ಪೇಟೆಗೆ ಬರುದಿಲ್ಲ ?” ಮೋಹನರಾಯರ ನಾಲಿಗೆಯ ತುದಿಯಲ್ಲಿಯೇ ಚಹ ಎಂಬ ಶಬ್ದ ಬಂದು ಮಾಯವಾಯಿತು. ಹೀಗೇಕೆ ಎಂದು ಚಿಂತಿಸಬಹುದು ನೀವು. ಮೋಹನರಾಯರು ತಮ್ಮ ಮನೆಗೆ ಬಂದವರಿಗೆ ಚಹವಿಲ್ಲದೆ ಕಳಿಸುವ ವ್ಯಕ್ತಿಯಲ್ಲ....

ಅಷ್ಟು ಉದಾರ ಮನಸ್ಸಿನವರು! ಇಂದು ಅವರನ್ನು ಒಳಗೆ ಕರೆಯುದೇ ತಾವು ಹೊರಟೇ ಬಿಟ್ಟರು........ಚಹ ಮಾಡಿಸುವ ಗದ್ದಲಕ್ಕೆ ಬಿದ್ದರೆ ಮತ್ತೆ ಅವಳನ್ನು ಮಾತಾಡಿಸಬೇಕಾಗುತ್ತದೆಂದು ಹೀಗೆ ಮಾಡಿರಬೇಕು.

ಪೇಟೆಗೆ ಹೋಗಿದ್ದ ರಾಯರು ಪಲ್ಲಿಯ ಗಂಟೆನೊಡನೆ ಮನೆ ಸೇರಿದರು. ಒಳಹೊಕ್ಕು ನೋಡಿದರು. ಅಡಿಗೆ ಸಿದ್ಧವಾಗಿರಲಿಲ್ಲ ಸುಂದರೆಯು ಅತ್ತಿಂದಿತ್ತ ಇತ್ತಿಂದತ್ತ ಗಡಿಬಿಡಿಯಿಂದ ಓಡಾಡುತ್ತಿದ್ದಳು. ರಾಯರು ಬಚ್ಚಲ ಮನೆಯನ್ನು ಸೇರಿ, ತಾವೇ ನೀರು ತೋಡಿಕೊಂಡು ಸ್ನಾನದ ಕಾಟ ತೀರಿಸಿಕೊಂಡರು. ಅವರು ಬಚ್ಚಲಮನೆಯಿಂದ ಹೊರಬೀಳುವದರೊಳಗಾಗಿ ತಾಟು ಬಟ್ಟಲಗಳು ಅಣಿಯಾಗಿದ್ದವು ಮಣೆಯ ಮುಂದೆ. ಹಾಗೆಯೇ ರಾಯರು ಬಂದು ಊಟಕ್ಕೆ ಕುಳಿತುಕೊಂಡರು. ಅಂದಿನ ಅಡಿಗೆಯಲ್ಲಿ ಸ್ವಾರಸ್ಯವೇ ಇರಲಿಲ್ಲ. ಸಾರು ಉಪ್ಪಿಲ್ಲದ್ದು ! ಪಲ್ಯ ಕಾರವಿಲ್ಲದ್ದು !! ಅನ್ನವು ಹಂಜಕ್ಕಿ ! ಹೀಗೆ ವಿವಿಧ ಅವತಾರ ಹೊಂದಿ ತಾಟಿನಲ್ಲಿ ಬಂದು ಸೇರಿದವು ! ಮೌನವ್ರತವನ್ನು ಹಿಡಿದ ರಾಯರು ಮಾತಾಡುವದೆಂತು? ಸಿಟ್ಟಿನಿಂದ ಅತ್ತಿಷ್ಟು ಇತ್ತಿಷ್ಟು ಬದಿಗೊತ್ತಿ ಎದ್ದೇ ಎದ್ದರು. ೧೧॥ ಯಾಗಿದ್ದರಿಂದ ಗಡಿಬಿಡಿಯಿಂದ ಆಫೀಸಿಗೆ ಹೊರಟರು.

ಸುಂದರೆಯು ಪತಿಯ ಮೌನಕ್ಕೆ ಮನದಲ್ಲಿಯೇ ಬೆದರಿದಳು. ಹಾಗೂ ಅರೆಊಟ ಮಾಡಿದುದಕ್ಕೆ ಮರುಗಿದಳು. ಮಾಡುವುದೇನು....?ತನ್ನದೇ ತಪ್ಪು ಬೆಳಗಿನಲ್ಲಿ ಎದ್ದು ಕೆಲಸಗಳನ್ನು ತೀರಿಸಬೇಕಾಗಿತ್ತು. ಆದರೆ ಮಗು ಬಿಡಬೇಕಲ್ಲ! ಅದರ ಅಳುವು....ನಗುವು ! ಮೋಹನರಾಯರು ಹೊರಟ ಕೂಡಲೇ ತಾನೂ ಇದ್ದಷ್ಟನ್ನು ಹಾಕಿಕೊಂಡು ಊಟಮುಗಿಸಿದಳು..ರಾಯರು ೪ಗಂಟೆಗೆ ಚಹಕ್ಕೆ ಬರುವದರೊಳಗಾಗಿ ಸ್ವಲ್ಪ ಹೊಟ್ಟೆ ತುಂಬುವ ಹಾಗೆ ಏನಾದರೂ ಮಾಡಬೇಕೆಂದು ಮಾಡಿದಳು. ಸರಿಯಾಗಿ ೪ ಗಂಟೆಯಾಯಿತು. ರಾಯರ ಸುಳುವಿಲ್ಲ! ಹಾಗೆಯೇ ಕುಳಿತುಕೊಂಡಳು ಮಗುವನ್ನಾಡಿಸುತ್ತ. ಮೋಹನ ರಾಯರು ಬರದ್ದನ್ನು ಕಂಡು ತಾನೂ ಏನನ್ನೂ ತಿನ್ನದೆ ಮಾಡಿದ ಚಹವನ್ನೊಂದೆಡೆಗೆ ಇರಿಸಿ ಹೊರಗೆ ಬಂದು ಬಿಟ್ಟಳು. ಪಾಪ !! ಕುಳಿತು ಕುಳಿತು ಬೇಸತ್ತು, ಮಗುವನ್ನು ಹೆಗಲ ಮೇಲೆ ಹಾಕಿಕೊಂಡು ಚಪ್ಪರಿಸುತ್ತಾ ಪಕ್ಕದ ಮನೆಯವರ ಸಂಗಡ ಹರಟೆ ಹೊಡೆಯುವದಕ್ಕಾಗಿ ಹೊರಟಳು.

ಮೋಹನರಾಯರು ಹಸಿವೆಯಿಂದ ಬಳಲಿದ್ದರು. ಅವಕ್ಕೂ ಮಿಗಿಲಾದ ತಾಪವೆಂದರೆ—ಮುಂಜಾವಿನಿಂದ ಒಂದೂ ಕೂಡಾ ನಗುವಿನ ಮಾತಿಲ್ಲ ಅವಳೊಂದಿಗೆ. ಪ್ರತಿ ನಿತ್ಯ ಎಷ್ಟು ರಸವತ್ತಾದ ಹರಟೆಗಳಾಗುತ್ತಿದ್ದವೊ? ಅವರಿಬ್ಬರಿಗೆ ಗೊತ್ತು! ರಾಯರು ತಮ್ಮ ಆಫೀಸಿನಲ್ಲಿಯ ಸುದ್ದಿಗಳನ್ನು ಸುಂದರೆಗೆ ವಿಸ್ತಾರವಾಗಿ ಹೇಳುವ ರೂಢಿ. ನಡುನಡುವೆ ಅವಳ ಮುಗುಳು ನಗೆ, ಕಣ್ಣುಗಳನ್ನು ಹೊರಳಿಸುವ ಚಾಪಲ್ಯ! ರಾಯರಿಗೆ ತಮ್ಮ ಶ್ರೀಮತಿಯ ಬಗ್ಗೆ ಆವೇಶ!! ಇವೆಲ್ಲವುಗಳು ಜರಗತಕ್ಕವೇ. ಆದರೆ ಇಂದು? ಆಕೆಯೊಂದಿಗೆ ಇಷ್ಟು ವೇಳೆ ಮಾತಾಡಿಸದಿದ್ದುದಕ್ಕೇ ಹುಚ್ಚು ಹಿಡಿದಿದ್ದಿತು! ಹಾಗೂ ಹೀಗೂ ಮಾಡಿ ೫ ಹೊಡೆಯಲು ಬಡಿಗೆ ತಿರುವುತ್ತ ಮನೆಗೆ ಧಾವಿಸಿ ಬಿಟ್ಟರು. ಬಾಗಿಲಿಗೆ ಬರಲು ಬಾಗಿಲಿಗೆ ಬೀಗ !! ಮೋಹನರಾಯರು ಬೆಪ್ಪಾಗಿ ನಿಂತು ಬಿಟ್ಟರು. ಪ್ರತಿನಿತ್ಯ ಬಾಗಿಲಿಗೆ ಬಂದು ನಸುನಗುತ್ತ ನಿಂತಿರುವ ಸುಂದರೆಯು ಇಂದು ಬೀಗ ಹಾಕಿ ಹೋಗಿದ್ದು ಆಶ್ಚರ್ಯಕರವಾಯಿತು. ತಮ್ಮೊಡೆಯಲ್ಲಿದ್ದ ಬೀಗದ ಕೈಯಿಂದ ಬಾಗಿಲ ತೆರೆದು ನೋಡಿದರು-ಮನೆಯು ಸ್ವಚ್ಛವಾಗಿತ್ತು, ಲೋಡುಗಳು ಗಂಜಿಯ ಬಟ್ಟೆಗಳನ್ನು ಹಾಕಿಕೊಂಡು ಗೋಡೆಗಳಿಗೆ ಒರಗಿದ್ದವು. "ಟೇಬಲ್" ದ ಮೇಲೆ ವ್ಯವಸ್ಥಿತವಾಗಿ ಪುಸ್ತಕಗಳಿದ್ದವು. ಸ್ವಚ್ಛವಾಗಿ ಒರಸಿ ಇಟ್ಟಿದ್ದ "ಸ್ಟ್ಯಾಂಡ" (ದೀವಿಗೆ) ಕಂಡಿತು. ಬದಿಯಲ್ಲಿಯೇ ಗೂಟಕ್ಕೆ ಮರುದಿವಸ ಹಾಕಿಕೊಳ್ಳಲಿಕ್ಕೆಂದು "ಇಸ್ತ್ರಿಯ" ಶರಟು ಕೋಟುಗಳು ತೂಗು ಬಿದ್ದಿದ್ದವು. ರಾಯರು ತುಸು ಬಗ್ಗಿ ನೋಡಿದರು. ಶರಟಿಗೆ ಗುಂಡಿಗಳು ತಿರುವುಮುರುವಾಗಿ ಸೇರಿಕೊಂಡಿದ್ದವು. ರಾಯರು ಮನದಲ್ಲಿಯೇ ನಕ್ಕರು. ಇಷ್ಟೆಲ್ಲವನ್ನು ಯಾರು ಮಾಡಿದ್ದರೆಂದು ಬೇರೆ ಹೇಳಬೇಕಿಲ್ಲ.

ರಾಯರು ಅತ್ತಿತ್ತ ತಿರುಗಾಡಲು ಪ್ರಾರಂಭಿಸಿದರು. ಸುಂದರೆಯು ಲಗುಬಗೆಯಿಂದ ಧಾವಿಸಿ ಬಂದಳು ಅವಳು ಮೆಟ್ಟಲು ಏರುವದಕ್ಕೂ ರಾಯರು ಬಾಗಿಲ ಎದುರಿಗೆ ಹಾಕಿದ್ದ ನಿಲುಗನ್ನಡಿಯ ಮುಂದೆ ಮುಖ ನೋಡುತ್ತ ನಿಲ್ಲುವದಕ್ಕೂ ಸರಿಹೋಯಿತು ಸುಂದರೆಯು ಧಾವಿಸಿ ಬರುವಾಗ ಸೆರಗಿಗೆ ಬದಿಯಲ್ಲಿಯ ಗುಲಾಬಿ ಕಂಟಿ ಸಿಕ್ಕಿತು. ತನ್ನ ಹೂಗಳನ್ನು ಮುಡಿದು ತನ್ನನ್ನೇ ಮರೆತು ಹೊರಟಿರುವಳೆಂದೋ ಏನೋ! ಹೃದಯ

ದಲ್ಲಿಯ ಪ್ರೀತಿಯು ಉಕ್ಕೇರಿ, ಹೊರಸೂಸಿ ಮತ್ತೆ ಅಡಗಿತೋ ಅನ್ನುವಂತೆ ಕೊರಳಲ್ಲಿಯ ನಕ್ಷತ್ರಮಾಲೆಯು ತುಸು ಕಂಡು ಸೆರಗಿನಲ್ಲಿ ಅಡಗಿಕೊಂಡಿತು. ಸುಂದರೆಯು ಒಂದು ಬಗೆಯ ಒಯ್ಯಾರದಿಂದ ಹಿಂದಿರುಗಿ ಸೆರಗನ್ನು ಬಿಡಿಸಿ ಕೊಂಡು ಮನೆಯ ಒಳಗೆ ಹೊಕ್ಕಳು. ರಾಯರು ಮುಗುಳುನಗೆ ಒಂದನ್ನು ಸೂಸಿದರೇನೊ ನಿಜ—ಆದರೆ ಮಾತಾಡಿಸಲಿಲ್ಲ. ಪ್ರತಿನಿತ್ಯದಂತಿದ್ದಿದ್ದರೆ "ಏನು ಸಿನೆಮಾದಲ್ಲಿಯ ನಟಿ ಮಾಡಿದ ಹಾಗೆ ಮಾಡಿದೆ" ಎಂದು ಅನ್ನ ಬೇಕಾಗಿತ್ತು. ಅದಕ್ಕೆ ಪ್ರತಿಯಾಗಿ "ನೀವು ಡೌಲು ಮಾಡುವದಿಲ್ಲವೇ ?" ಎಂದು ಅವಳ ಉತ್ತರ ಬರಬಹುದಾಗಿತ್ತು. ಅದಕ್ಕೆ ಮೋಹನರಾಯರ ತತ್ವಜ್ಞಾನ ಹೀಗೆ "ಏನು ಹೆಣ್ಣುಮಕ್ಕಳ ಸಲುವಾಗಿಯೇ ಎಲ್ಲವು ಹಾಳಾ ಗುವದು, ನಮ್ಮದೇನಿದೆ ?" ಎಂದು. ರಾಯರು ತಾವು ತೀರ ಸಾದಾ ಆಗಿ ಬಿಟ್ಟಿದ್ದೇವೆಂದು ಅವರ ಮತ. ಡೌಲಿನ ಬಗ್ಗೆ ಕೇಳಿದರೆ ರಾಯರು "ನಮ್ಮ ಕಾಲದ ಡೌಲು ಈಗ ಹೋಗಿ ಬಿಟ್ಟಿದೆ." ಎಂದು ಉತ್ತರ ಕೊಡುವ ರೂಢಿ.

ರಾಯರು ಹೇಳಿದಂತೆ ದಿವಸ ದಿವಸಕ್ಕೆ ಹೊಸದು ಬರಹತ್ತಿದೆ. ಈಗ "These are the days of fashion" ಎಂದು ಹೇಳಿಕೊಳ್ಳುವ ಕಾಲವಿದು. ಮೊದಲು ಶರಟಿನ ಕಾಲರ ಗೇಣು ಉದ್ದ ಯಾಕೆ, ಇನ್ನೂ ತುಸು ಹೆಚ್ಚು ಎಂದರೂ ಅಡ್ಡಿಯಿಲ್ಲ ಹಚ್ಚಿಸುವ ರೂಢಿಯಾಗಿದ್ದಿತು. ಅಧುನಿಕರ ಕಾಲವಿದು ....ದುಡ್ಡಿಲ್ಲದ್ದು....ಬಡತನದ್ದು—ಅದಕ್ಕೆ ಬಟ್ಟಿನಗಲದಷ್ಟೇ ಕಾಲರ ಹಚ್ಚಿಸು ವದು ನಾವು ! ಇದರಂತೆಯೇ ಕೋಟಿನ ಅವಸ್ಥೆಯಾಗಿರಬೇಕು. ಜವಾನ ರಾಶಿ ಸಾಲುಸಾಲಾಗಿ ಮಧ್ಯದಲ್ಲಿ ಅಷ್ಟೇ ಅಳತೆ ಬಿಟ್ಟು ಕುತ್ತಿಗೆಯಿಂದ ತಳದವರೆಗೆ ಗುಂಡಿಗಳನ್ನು ಹಚ್ಚುವದು ಹೋಗಿ, ಅಂದರೆ Retrenchment ಆಗಿ ೨, ೩, ಇಷ್ಟೇ ಉಳಿದಿರಬೇಕು. ಇನ್ನೂ ಹೇಳಬೇಕಂದಲ್ಲಿ ಎಷ್ಟೋ ಇವೆ. ಆದರೆ ಸದ್ಯಕ್ಕೆ ಸಾಕುಮಾಡಿ ಬಿಡುವ. ನಮ್ಮ ಹಿಂದಿನ ಹೆಣ್ಣು ಮಕ್ಕಳು ಸೀರೆ ತೆಗೆದು ಕೊಳ್ಳುವಾಗ ಗೇಣಿನಿಂದ ಅಂಚನ್ನು ಅಳೆದು ತೆಗೆದು ಕೊಳ್ಳುವ ರೂಢಿಯಿದ್ದಿಲ್ಲವೇ ? ಈಗ ! "ಅಂಚಿಲ್ಲದ್ದನ್ನು ಕೊಡಿರಿ ಎಂದು ಆರಿಸಿ ತೆಗೆದು ಕೊಳ್ಳುವವರಲ್ಲವೆ ? ಇದಕ್ಕೂ ನಮ್ಮ ಉತ್ತರ "These are the days of fashion" ಎಂದು ಏನನ್ನೊ ಹೇಳುತ್ತ ಕಥೆ ಹೇಳುವದನ್ನು ಮರೆತುಬಿಟ್ಟೆ.

ಹೀಗೆ ನಗುವಿನ ಹರಟೆಗಳು ಆಗತಕ್ಕವುಗಳು ಪ್ರತಿದಿನವು–ರಾಯರಿಗೂ ಸುಂದರೆಗೂ. ಇಂದು ಮೋಹನರಾಯರು ವಿರಾಮ ಕುರ್ಚಿಯಲ್ಲಿ ಮಂಡಿಸಿ 'Times' ಓದುವದರಲ್ಲಿ ಮಗ್ನರಾದಂತೆ ನಟಿಸಿದರು. ಆದರೆ ಒಳಗಿನಿಂದ ಕೂಗು ಬಂದಿತು. "ಎಷ್ಟು ಅಳತಿಯೋ ಅಳು" ಎಂದು. ರಾಯರು ನೀಟಾಗಿ ಕುಳಿತು ಒಳಗೆ ಇಣಿಕಿ ನೋಡಿದರು. ಸುಂದರೆಯು ಮಗುವನ್ನು ತಂದು "ಕರಕೊಳ್ಳಿರೀ ಇವನನ್ನು....ಎಷ್ಟು ಕಾಡಿಸುವದು!" ಎಂದು ಮಗುವನ್ನು ಕೈಯಲ್ಲಿ ಕೊಟ್ಟು ಒಳಗೆ ಹೋದಳು. ರಾಯರು ನೋಡುತ್ತಾರೆ. ಮಗುವಿನ ಮೈ ಬೆಚ್ಚಗಾಗಿದೆ !....ಅದಕ್ಕೆ ಕಾಯಿಲೆ !! ಬೆಳಗಿನಿಂದ ಹೀಗೆ ಮಾಡಿದುದು ಉಚಿತವಾಗಲಿಲ್ಲವೆಂದು ರಾಯರು ಮನಗಂಡು—ತಾವೇ "ಅಲ್ಲಾ, ಕಿಟ್ಟಗ ಜ್ವರ ಬಂದದ್ದು ಹೇಳಬಾರದ ನನ್ನ ಮುಂದ....ಆ—ಂ—ಂ ಏನಂದೀ ಽ ಽ". ಸುಂದರೆಯು ನಡುಮನೆಯ ಬಾಗಿಲಿಗೆ ಬಂದು "ನೀವು ಮಾತೇ ಆಡಲಿಲ್ಲ....ನಾನರೆ ಏನು ಮಾಡುವುದು?" ಎಂದು ಕಣ್ಣಿನಲ್ಲಿಯ ನೀರನ್ನು ಒರಿಸಿಕೊಂಡಳು. "ಮತ್ತೆ ಒಳಗ ಬರತೀರೇನು ?" ಎಂದಳು.

"ಎಂಥ ಹುಚ್ಚಿ ನೀನು....ಮಗುವಿಗೆ ಕಾಯಿಲೆಯಾದರೂ ಕೂಡಾ ಹೇಳಬಾರದೆ ?" ಎಂದನ್ನುತ್ತಾ ಒಳಗೆ ಬಂದು ಮಣೆಯ ಮೇಲೆ ಕುಳಿತು ಮಗುವನ್ನು ತೊಡೆಯ ಮೇಲೆ ಹಾಕಿಕೊಂಡರು. ಸುಂದರೆಯು ಕಪ್ಪು ಬಸಿಗಳನ್ನು ಮುಂದಿರಿಸಿ ಮಗುವನ್ನೆತ್ತಿಕೊಂಡಳು. ಮಗುವು ಕಪ್ಪು ಬಸಿಗಳನ್ನು ನೋಡಿ ಹಿಗ್ಗಿ ಹಾರಿತು. ದಂಪತಿಗಳೀರ್ವರು ಮಗುವಿಗೆ ಮುದ್ದುಕೊಡಲು ಬಾಗಿದರು........ಇತ್ತ "ಸ್ಟೋ" ಭರ್ ಅನ್ನುತ್ತಿತ್ತು.



# ನಿಂಗನ ನಂಬಿಗೆ



ಹೊಸಳ್ಳಿ ನೋಡುವದಕ್ಕೆ ಸಣ್ಣದಾದರೂ ಕಣ್ಣಿಗೆ ಅಂದವಾಗಿದೆ. ಬೆಳವಲ ನಾಡಿನಲ್ಲಿ ಬರಿ ಬಯಲೆಂದು ಟೀಕೆ ಮಾಡುವವರಿಗೆ ಹೊಸಳ್ಳಿ ಕೂಗಿ ಹೇಳುತ್ತಿದೆ—ತಾನು ಮಲೆನಾಡ ಮಗಳೆಂದು ! ಊರ ಸುತ್ತಲೂ ಎಲೆ ತೋಟಗಳು, ತೋಟಗಳಲ್ಲಿ ಯಾವಾಗಲೂ ಕಿರಚುವ ಯಾತದ ಬಾವಿಗಳು, ಗಿಡಗಳಲ್ಲಿ ಸುಳಿದು ಮೈಗೆ ತಂಪನ್ನುಂಟು ಮಾಡುವ ಗಾಳಿ—ಹೊಸೂರಿಗೆ ಒಂದು ಬಗೆಯ ಕಳೆ ತಂದು ಕೊಟ್ಟಿದೆ. ಊರ ಹತ್ತಿರವೇ ಒಂದು ಚಿಕ್ಕ ಹಳ್ಳ ಹರಿಯುತ್ತಿದೆ. ಆ ಹಳ್ಳದ ಎರಡೂ ಪಕ್ಕಕ್ಕೆ ಹಾಯಾಗಿ ಒರಗಿರುವ ಪಚ್ಚಪಯರಿನ ಹೊಲಗಳು, ಪರಊರಿಂದ ಬಂದವರಿಗೆ, ಹೊಸೂರ ಹೆಮ್ಮೆಯನ್ನು ಗೊತ್ತು ಮಾಡಿ ಕೊಡುವದರಲ್ಲಿ ಸಂದೇಹವಿಲ್ಲ !

ಹೊಸೂರು ಚಿಕ್ಕದೆಂದು ಮೊದಲೇ ಹೇಳಿದ್ದೇನೆ. ಹೊಸೂರು ಪ್ರವೇಸಿಸುವವರಿಗೆ ಮೊದಲು ಕಣ್ಣಿಗೆ ಬೀಳುವವು—ಗುಡಿಸಲು. ತುಸು ಒಳಗೆ ಬಂದರೆ ಹಂಚಿನ ಚಪ್ಪರಗಳು. ಊರ ಮಧ್ಯದಲ್ಲಿ ನಾಲ್ಕಾರು ದೊಡ್ಡ ಮನೆಗಳು. ಆಯಿತು ಇದುವೇ ಹೊಸುರು! ಈ ಚಿಕ್ಕ ಹಳ್ಳಿಯಲ್ಲಿ ತೋಟದ ಸ್ವಾಮಿರಾಯರನ್ನು ಅರಿಯದವರಾರೂ ಇಲ್ಲ. ಸ್ವಾಮಿರಾಯರು ಊರ ಪ್ರತಿಷ್ಠಿತ ಗೃಹಸ್ಥರಲ್ಲೊಬ್ಬರು. ಜನರಲ್ಲಿ ಬೆರೆತು ಬದುಕುವ ಹದವು ಅವರಿಗೆ ಜನ್ಮತಃ ಬಂದುದು. ಹೊಸೂರು ಹಳ್ಳದ ಹತ್ತರವೇ ಅವರಿಗೊಂದು ತೋಟವಿದೆ. ತುಸು ಮುಂದಕ್ಕೆ ಹೋದರೆ ಅಲ್ಲಿಯೊಂದು ಅವರ ಹೊಲವೂ ಉಂಟು. ಊರ ಮಧ್ಯದಲ್ಲಿ ಅಷ್ಟು ದೊಡ್ಡದಲ್ಲದಿದ್ದರೂ-ತೀರ ಸಣ್ಣದಲ್ಲದ ಮನೆ ಇದೆ. ಮನೆಯ ಮಡದಿಯಂತೂ ರಾಯರ ಮಹಾಲಕ್ಷ್ಮಿಯೇ ಸರಿ ! ರಾಯರಿಗೆ ಒಂದು ಗಂಡು ಹಾಗು ಒಂದು ಹೆಣ್ಣು ಹೀಗೆ ಸಂತತಿ. ಒಟ್ಟಿನ ಮೇಲೆ ರಾಯರು ಸುಖಿಗಳು. ಸ್ವಾಮಿರಾಯರು ಊರ ಜಗಳಗಳು ಹಬ್ಬದಂತೆ ಹಾಗೂ ಜನರ ಮನಸ್ಸು ನೋಯದಂತೆ ಹದವಾಗಿ ಮಾತನಾಡಿ ಹಳ್ಳಿಯ

ವಾತಾವರಣವನ್ನು ತಿಳಿಯಾಗಿಡುವವರಲ್ಲಿ ಬಹುಬಲ್ಲಿದರು. ಸುತ್ತುಮುತ್ತಣ ಹಳ್ಳಿಗಳಲ್ಲಿಯೂ ಅವರ ಮಾತಿಗೆ ಒಂದು ಬೆಲೆ ಇದೆ.

ಸ್ವಾಮಿರಾಯರಿಗೆ ಆ ಊರ ಸಂಗಣ್ಣಶೆಟ್ಟರಮೇಲೆ ವಿಶ್ವಾಸ ಬಹಳ. ಸಂಗಣ್ಣಶೆಟ್ಟರಾದರೂ ರಾಯರಲ್ಲಿ ಒಂದು ಗೆಳೆತನದ ಸಲುಗೆಯಿಂದ ಮಾತನಾಡುವರು, ನಗುವರು, ಚೇಷ್ಟೆಮಾಡುವರು. ಪ್ರತಿದಿವಸ ಸಂಜೆಗೆ ಶೆಟ್ಟರೂ ಸ್ವಾಮಿರಾಯರೂ ಕೂಡಿ ತೋಟದ ಕಡೆಗೆ ತಿರುಗಾಡುವದಕ್ಕೆ ಹೋಗುವ ರೂಢಿ. ಸಂಜೆಯಾಗುತ್ತಲೇ ರಾಯರು ತಮ್ಮ ಬಿಳಿ ರುಮಾಲ ತಲೆಗೆ ಸುತ್ತಿ, ಕಾಲಲ್ಲಿ ಮೊಚ್ಚೆ ಮೆಟ್ಟಿ, ಶೆಟ್ಟರ ಅಂಗಡಿಗೆ ಬಂದು "ಏಳಪ s ಶೆಟ್ಟಿ ನಿನ್ನ ಹೊಟ್ಟಿ ಇಷ್ಟು ಕರಗಲಿ !" ಎಂದು ಚೇಷ್ಟೆ ಮಾಡುವರು. ಶೆಟ್ಟಿಯಾದರೂ ವಿನೋದ ಪ್ರಿಯ. "ಶೆಟ್ಟಿಯ ಹೊಟ್ಟಿ ಬೆಳೆದರ ಊರಾಗಿನ ನಾಕ ಜನಕ್ಕ ಸಾಲ ಸಿಕ್ಕೀತು ತಿಳಿತ ?" ಎಂದು ಗಹಗಹಿಸಿ ನಗುವ. ಹೀಗೆ ಚೇಷ್ಟೆ ಮಾಡುತ್ತ ಇಬ್ಬರೂ ತೋಟಕ್ಕೆ ಹೋಗುವರು. ಪ್ರತಿದಿವಸದಂತೆ ರಾಯರು ಒಂದು ದಿನ ಶೆಟ್ಟಿಯನ್ನು ಕರೆದುಕೊಂಡು ತೋಟಕ್ಕೆ ಹೊರಟಾಗ ಶೆಟ್ಟಿ ಸುಮ್ಮನೆ ಬರುವದನ್ನು ಕಂಡು ಸ್ವಾಮಿರಾಯರು " ಯಾಕೊ....ಶೆಟ್ಟಿ ಬಹಳ ವಿಚಾರ ನಡದದ ?" ಎಂದರು.

" ಸ್ವಾಮಿರಾಯ ! ಬಾಳೇವು ಬದಕು ಬೆಳಿಬೇಕಾದರ........ನಾವು ಸುಮ್ಮನ ಇರಾಕ ಆಗುದಿಲ್ಲಾ.... "

" ಅಂದರೇನೋ ಸ್ಪಷ್ಟ ಹೇಳಲಾ "

" ಇಷ್ಟೂ ತಿಳಿಬಾರದ ನಿನಗ....ನಿನ? ಇದ್ದದ್ದು ಇಟಕೊಂತ ಹೋದರ ಸಾವುಕಾರ ಹ್ಯಾಂಗ ಆಗೋದು ?"

" ಅಂದರ ತುಡುಗ ಮಾಡಬೇಕಂತಿಯೇನು ?"

" ಅಲಲಲ! ಇದಕ ನೋಡ ನಿಮಗ s........ರಾಯರಿಗೆ ಬುದ್ಧಿ ಇಲ್ಲ ಅನ್ನೋದು. "

" ಅಲ್ಲೋ ಶೆಟ್ಟಿ ಇದ್ದ ಬುದ್ಧಿ ಎಲ್ಲ ಸಾವುಕಾರ ಆಗೋದಕ್ಕ ಖರ್ಚು ಮಾಡಿ ಬಿಡಬೇಕಂತಿ ಏನು?" ಎಂದು ರಾಯರು ನಗುತ್ತಿರುವಾಗಲೇ ಎದುರಿನಲ್ಲಿ ನಾಲ್ವಾರು ಹಳ್ಳಿಗರು ದನ ಹೊಡೆದುಕೊಂಡು ಬರುವದನ್ನು ಕಂಡು ಶೆಟ್ಟಿ " ಸ್ವಾಮಿರಾಯ, ಈ ಒಕ್ಕಲಿಗರಿಗೆ ಹಿಂದ ಮುಂದಿನ ವಿಚಾರನ

ಇರುದುಲ್ಲ ನೋಡು ” ಎಂದು ನುಡಿದ. ಅದಕ್ಕೇ ಸ್ವಾಮಿರಾಯ ಪ್ರತಿಯಾಗಿ “ ಅವರಿಗೆ ಇಲ್ಲದ ಹವ್ಯಾಸ ಇರುದುಲ್ಲ ನೋಡು. ಚಿಂತಿ ಅವರ ಹತ್ತರ ಬರುದುಲ್ಲ ” ಎಂದು ನುಡಿದು ತಮ್ಮ ಕೈಬಡಿಗಿ ಬೀಸಿದರು. ರಾಯರು ನುಡಿದ ಮಾತಿನಿಂದ ಶೆಟ್ಟಿಯ ಮನಸ್ಸು ತಿಳಿಯಾಗಲಿಲ್ಲ. ಶೆಟ್ಟಿಯು ಏನೋ ಯೋಚನೆ ಮಾಡಿದಂತೆ ಮಾಡಿ “ ಸ್ವಾಮಿರಾಯ ನೀ ತ್ವಾಟದಾಗಿರು ...ನಾ ಈಗ ಬರತೆನಿ ” ಎಂದು ಹೇಳಿ, ದನಹೊಡೆದುಕೊಂಡು ಬರುವ ಜನರ ಕಡೆಗೆ ನಡೆದು ಬಿಟ್ಟ ! ಸ್ವಾಮಿರಾಯ ಸಾವುಕಾಶವಾಗಿ ತೋಟವನ್ನು ಹೊಕ್ಕು ತೋಟದಲ್ಲಿಯ ಸೊಬಗನ್ನು ಕಂಡು ಹಿಗ್ಗಿ, ಬಾವಿಯ ಕಟ್ಟೆಯ ಮೇಲೆ “ ರಾಮ ರಾಮ ” ಎಂದು ಕುಳಿತುಕೊಂಡರು.

ಸಂಗಣ್ಣಾ ಶೆಟ್ಟರು ತಮ್ಮ ಕಡೆಗೆ ಬರುವುದನ್ನು ಕಂಡು ಒಕ್ಕಲಿಗರು ವಿನಯದಿಂದ ನಿಂತು “ ಶರಣರೀ ಶೆಟ್ಟರ ” ಎಂದು ನಮಸ್ಕಾರ ಮಾಡಿದರು. ಶೆಟ್ಟರು “ ಏ ನಿಂಗ್ಯಾ ನಾ ನಿನಗ ಎಷ್ಟು ಹೇಳಬೇಕು ಅಂಗಡೀಕಡೇಬಾ ಅಂತ. ” ಎಂದು ನಿಂಗನ ಕಡೆಗೆ ನೋಡಿ ಗದ್ದರಿಸಿದರು. ನಿಂಗ ಸಾವುಕಾಶವಾಗಿ “ ಶೆಟ್ಟರ ಇನ್ನೆರಡ ದಿವಸ ತಡೀರಿ, ನಮ್ಮ ತಾಯಿ ಊರಿಗೆ ಹೋಗ್ಯಾಳರಿ ” ಎಂದ.

“ ಎಲೆ....ನೀ ಬಾಳ ಬೆರಕಿ ಆದೀಲು. ನೀ ಬಾಳ ನಿಮ್ಮ ಅವ್ವನ ಮಾತ ಕೇಳಾವ. ಸಾಲಾ ಮಾಡುಮುಂದ ನಿಮ್ಮ ಅವ್ವನ್ನ ಕೇಳಿ ಮಾಡಿದೇನು ? ” ಶೆಟ್ಟರ ಸಿಟ್ಟು ಕಣ್ಣಿನಲ್ಲಿ ಕಾಣಿಸಿಕೊಂಡಿತು. ಇವರ ಮಾತಿಗೆ ಇನ್ನುಳಿದ ಒಕ್ಕಲಿಗರು ಬಿದ್ದು ಬಿದ್ದು ನಕ್ಕರು. ನಿಂಗನು ಮಾತ್ರ ಹುಚ್ಚನಂತೆ ನಿಂತುಕೊಂಡ. ಸಾಲದ ಶೂಲ ಸಾಮಾನ್ಯವೆ ? ಒಕ್ಕಲಿಗರ ಗುಂಪಿನಲ್ಲೊಬ್ಬ “ ಏ ನಿಂಗಣ್ಣಾ, ನೀ ಸಣ್ಣ ಹುಡುಗ. ನಿನಗ ತಿಳ್ಯಾಕಿಲ್ಲ ಕೇಳು—ಶೆಟ್ಟರ ಮರ್ಜಿ ಕಳಕೊಂಡರ ನೀ ಬಾಳೀವು ಹ್ಯಾಂಗ ಮಾಡಿ ? ಹೋಗು. ಶೆಟ್ಟರು ಹ್ಯಾಗ ಹೇಳತಾರ ಹಾಗ ಮಾಡು. ಅವರು ಬಡವರ ಭಾಗ್ಯೆವು ತಿಳಿತ ಮಳ್ಳ ! ” ಎಂದ. ಅದಕ್ಕೆ ನಿಂಗ ನಿರ್ವಾಹವಿಲ್ಲದೆ “ ಆತರಿ ಶೆಟ್ಟರ ರಾತ್ರಿ ನಿಮ್ಮ ಅಂಗಡಿ ಕಡ್ಯಾಕ ಬರತೇನ್ರಿ ” ಎಂದು ದನಗಳನ್ನು ಮುಂದೆ ಹೊಡೆದ. ಇತ್ತ ಶೆಟ್ಟರು ತ್ವರಿತ ಹೆಜ್ಜೆ ಹಾಕುತ್ತ ಸ್ವಾಮಿರಾಯರ ತೋಟ ಸೇರಿದರು.

ಈ ಸಂಗತಿ ಜರುಗಿ ನಾಲ್ಕಾರು ದಿನಗಳಾಗಿರಬಹುದು. ಎಂದಿನಂತೆ ಸ್ವಾಮಿರಾಯರು ಸಾಯಂಕಾಲ ತಮ್ಮ ತೋಟಕ್ಕೆ ಹೋಗಿದ್ದರು. ತಿರುಗಿ ಬರಬೇಕಾದರೆ ತುಸು ಕತ್ತಲೆಯೇ ಆಯಿತು. ವೇಳೆಯಾಯಿತೆಂದು ಗಡಿಬಿಡಿಯಿಂದ ಮನೆಗೆ ಬಂದು ಸೇರಿದರು. ರಾಯರು ಮನೆಗೆ ಬಂದಾಗ ಮನೆಯ ಪಡಸಾಲೆಯಲ್ಲಿ ನಿಂಗನ ತಾಯಿ, ಮಲ್ಲ ರಾಯರ ಮಡದಿಯೊಡನೆ ಏನೋ ದುಃಖ ತೋಡಿಕೊಳ್ಳುತ್ತ ಕುಳಿತಿದ್ದರು. ರಾಯರು ಬಂದೊಡನೆ ಅವರ ಕಾಲಿಗೆ ಬಿದ್ದು "ಎಪ್ಪಾ ನನ್ನ ನಿಂಗನ್ನ ಉಳಸರಿ" ಎಂದು ಅಳಹತ್ತಿದಳು. ರಾಯರಿಗೆ ಇದಾವದು ತಿಳಿಯದೆ "ಏ ಮಲ್ಲವ್ವ ಎದ್ದರ ಏಳು. ನಿನಗೇನಾಗೇದ ಹೇಳು" ಎಂದು ಸಮಾಧಾನ ಮಾಡಿದರು. ಮಲ್ಲವ್ವ ಬಿಕ್ಕುತ್ತ "ಎಪ್ಪ ನಮ್ಮ ಊರ ಮುಂದಿನ ಹೊಲಾ ಶೆಟ್ಟರ ಬಾಯಾಗ ಬಿತ್ತರಿ ಹ್ಯಾಗಾರ ಮಾಡಿ ಬಡವ ನಿಂಗನ್ನ ಉಳಸರಿ. ನಾ ಊರಿಗೆ ಹೋದಾಗ ಶೆಟ್ಟರು ನಿಂಗನ್ನ ಬೆದರಸಿ ಕಾಗದ ಬರೆಸಿಕೊಂಡಾರ್ರಿ."

"ನಿಂಗ ಶೆಟ್ಟರ ಕಡೆ ಯಾಕ ಸಾಲಾ ಮಾಡಿದ್ದ ?"

"ನಾ ಊರಿಗೆ ಹೋದದ್ದು ನೋಡಿ ಹೊಲ ಬರೆಸಿಕೊಂಡಾರ್ರಿ-ಬೆದರಿಸಿ. ನಮ್ಮ ನಿಂಗ ಎತ್ತು ಕೊಳ್ಳಾಕ ನೂರು ರೂಪಾಯಿ ತಂದಿದ್ದ!" ರಾಯರು ತುಸು ಅತ್ತ ಇತ್ತ ಶತಪಥ ಮಾಡಿ ಲೋಡಿಗೆ ಆತು ಕುಳಿತುಕೊಂಡರು. ಅಂದು ಶೆಟ್ಟಿಯು ತಮ್ಮೆದುರಿನಲ್ಲಿ ತನ್ನ ಸಾವುಕಾರಿಕೆ ಹೆಚ್ಚಿಸುವದರ ಬಗ್ಗೆ ಮಾತನಾಡಿದ ಸಂದಿಗ್ಧ ಮಾತುಗಳ ಅರ್ಥ ರಾಯರಿಗೆ ಹೊಳೆಯಿತು. ಬಡ ನಿಂಗನ ಗೋಣು ಮುರಿಯುವ ಹಂಚಿಕೆ ಕಂಡು ಮನದಲ್ಲಿ ಮರುಗಿ "ಏ....ಮಲ್ಲವ್ವ ನಿನ್ನ ಮಾರಿ ನೋಡಿ ನಾ ರೂಪಾಯಿ ಕೊಡತೇನಿ ಹೊಲಾ ಬಿಡಿಸಿಕೋ ತಿಳಿತಿಲ್ಲೋ"

"ಎಪ್ಪಾ ದೇವರು ನಿಮಗ ಚಲೋದು ಮಾಡ್ಲಿ" ಎಂದು ಹಾಡಿ ಹರಿಸಿ ಮಲ್ಲವ್ವ ಮನೆಗೆ ಹೋದಳು.

ನಿಂಗ ಮಲ್ಲವ್ವ ಕೂಡಿ ತಮ್ಮ ಹೊಲ ಬಿಡಿಸಿಕೊಂಡದ್ದು ಶೆಟ್ಟರಿಗೆ ಕೆಲವು ದಿವಸ ಒಡೆಯಲಾರದ ಒಗಟವಾಯಿತು. ತಮ್ಮ ಹೊಲದ ಹತ್ತರವೇ ಇರುವ ನಿಂಗನ ಹೊಲ ತಮಗೆ ಬರಬೇಕೆಂದು ಹಾಕಿದ ಶೆಟ್ಟರ ಹೊಂಚು

ಬಯಲಾಯಿತು. ಶೆಟ್ಟಿಯೂ ಸೂಕ್ಷ್ಮವಾಗಿ ವಿಚಾರಮಾಡಿ ಕೊನೆಗೆ ಸ್ವಾಮಿರಾಯನೇ ಇದಕ್ಕೆ ಕಾರಣವೆಂದು ತಿಳಿದು ಮನದಲ್ಲಿಯೇ ಸ್ವಾಮಿರಾಯನ ಬಗ್ಗೆ ಮತ್ಸರ ಬಡಹತ್ತಿದ. ಎದುರು ಮಾತನಾಡವಷ್ಟು ಧೈರ್ಯ ಶೆಟ್ಟರಿಗಿರದಿದ್ದರೂ ಸ್ವಾಮಿರಾಯರನ್ನು ಹಿಂದೆ ಅಲ್ಲಗಳೆಯುವದಕ್ಕೆ ಪ್ರಾರಂಭ ಮಾಡಿದರು. ಮೂರು ನಾಲ್ಕು ವರುಷಗಳು ಹೀಗೆಯೇ ಗತಿಸಿದವು. ಈಗ ಸ್ವಾಮಿರಾಯರ ಹಿರಿಯ ಮಗ ಮುಂಬಯಿಯಲ್ಲಿ ಕಲಿಯುವದಕ್ಕೆಹೋಗಿದ್ದ. ಮಗಳ ಮದುವೆಯಂತೂ ಮಾಡಲೇ ಬೇಕಾಗಿತ್ತು. ಸ್ವಾಮಿರಾಯರು ದುಡ್ಡಿನ ತೊಂದರೆಯಲ್ಲಿ ಮುಳುಗಿ ಏಳುತ್ತಿದ್ದರು. ಪ್ರತಿದಿವಸ ರಾಯರಿಗೂ ಅವರ ಪತ್ನಿಗೂ ಮಗಳ ಮದುವೆಯ ಬಗ್ಗೆವಾದವು ನಡೆಯುತ್ತಲೇ ಇದ್ದಿತು. ರಾಯರು ಮನಸ್ಸಿನಲ್ಲಿಯೇ ಕೊರಗಿ ಸೊರಗುತ್ತಿದ್ದರು. ಮತ್ತು ಇತ್ತಿತ್ತಲಾಗಿ ಶೆಟ್ಟಿಯ ಕಡೆಗೆ ಹೋಗುವುದನ್ನೇ ಬಿಟ್ಟಿದ್ದರು. ಇದರ ಅರ್ಥವನ್ನು ಶೆಟ್ಟಿ ಬೇರೆಯಾಗಿಯೇ ಮಾಡಿಕೊಂಡ ! ಒಂದು ದಿನ ರಾಯರು ತೋಟಕ್ಕೆ ಹೋಗಿ ಎಂದಿನಂತೆ ತೋಟದ ಬಾವಿಯ ಕಟ್ಟೆಯಮೇಲೆ ಕುಳಿತುಕೊಂಡರು. ಮನಸ್ಸು ಮಾತ್ರ ಚಿಂತೆಯನ್ನೇ ನೇಯುತ್ತಿತು. ವಿಚಾರ........ವಿಚಾರ ತಲೆ ತುಂಬ ವಿಚಾರ ! ಹೀಗಿರುವಾಗ ಅವರಿಗೆ ಒಂದು ಯೋಚನೆ ತಟ್ಟನೆ ಹೊಳೆಯಿತು. ತಮ್ಮ ತೋಟಿಗ ಹಿಡಿತದಿಂದ ಬಾಳುವೆ ಮಾಡುವವ, ಅವನ ಹತ್ತಿರ ತುಸು ದುಡ್ಡು ಸಿಗಬಹುದು. ಆದ್ದರಿಂದ ಸಾಲ ಕೇಳಬೇಕೆಂದು ನಿರ್ಧರಿಸಿ, ಅಲ್ಲಿಯೇ ಬಾಳೆಗಿಡಗಳಿಗೆ ನೀರು ತಿರುವುತ್ತಿರುವ ಕರಿಯಪ್ಪನಿಗೆ " ಏ ಕರಿಯಪ್ಪ ಬಾ ಇಲ್ಲೆ " ಎಂದು ಕೂಗಿದರು.

ಕರಿಯಪ್ಪ ರಾಯರಿಗೆ ಮನ್ನಣೆ ಕೊಟ್ಟನೋ ಇಲ್ಲವೋ ಎನ್ನುವಂತೆ-ಬಂದು ತುಸು ಗಡುಸು ಧ್ವನಿಯಲ್ಲಿ " ಯಾಕರೀ.........ರಾಯರ ಽ " ಎಂದ. ರಾಯರು ತುಸು ಮೆಲ್ಲಗೆ "ಕರಿಯಪ್ಪಾ ನಾ ನಿನಗೊಂದು ಮಾತಕೇಳತೇನಿ" ಅದಕ್ಕೆ ಕರಿಯಪ್ಪ "ಅದೇನ್ರಿ....ಅಂಥಾದು" ಎಂದು ಸಂಶಯವನ್ನೇ ತೆಗೆದುಕೊಂಡ. ರಾಯರು ಅವನ ವಿಚಿತ್ರ ರೀತಿಯನ್ನು ಕಂಡು ಚಕಿತರಾಗಿ " ಮತ್ತೇನು ಇಲ್ಲ, ನಿನ್ನ ಕಡೆ ಒಂದು ಸಾವಿರ ರೂಪಾಯಿ ಇದ್ದರ ಕೊಡು ಸಾಲ ಅಂತ " ಎಂದರು. ಕರಿಯ ತುಸು ನಕ್ಕು " ರಾಯರಽ ನಿಂಗನ್ನರ ಕೇಳ್ರಿ. ನಿಮ್ಮ ತೋಟ ಮಾಡಾಕ ಅಡ್ಯಾಡಾಕ ಹತ್ಯಾನು " ಎಂದು

ಕೊಂಕು ನುಡಿದ. ಶೆಟ್ಟಿ ಊರಿದ ಬೀಜ ಮೊಳಕೆ ಒಡೆದಿತ್ತು! ಈ ರೀತಿಯ ಮಾತುಗಳನ್ನು ಕರಿಯನಾಡುವನೆಂದು ರಾಯರು ತಿಳಿದಿರಲಿಲ್ಲ. ಅವರಿಗೆ ತುಸು ಅಸಹ್ಯವೆನಿಸಿತು.

"ಕರಿಯಪ್ಪ ನೀ ನನ್ನ ತೋಟಿಗ, ನಿನ್ನ ಬಿಟ್ಟು ಯಾರಿಗೂ ತೋಟ ಕೊಡೂವಿಲ್ಲ. ನೀನು ನನಗ ಸಾಲಕೊಡೂದು ಬ್ಯಾಡ" ಎಂದು ಹೇಳಿ ಮತ್ತೆ "ನಿನ್ನ ಕೆಲಸ ಮಾಡು; ನಾ ಹರಕತ್ತ ಮಾಡಿದೆ" ಎಂದರು. ಕರಿಯ ಸಾವಕಾಶವಾಗಿ ಕಾಲ್ದೆಗೆದ; ಧಾರಣಿಗಳ ಏರು ಇಳಿತಗಳಿಂದ ತೋಟದಲ್ಲಿ ಅವರಿಗೆ ಬರುವಷ್ಟು ಬರುತ್ತಿರಲಿಲ್ಲ. ಶೆಟ್ಟರ ಪ್ರೋತ್ಸಾಹದಿಂದ ತೋಟಿಗ ಕರಿಯಪ್ಪ ಮೊದಲಿನಂತೆ ದುಡಿಯದಾದ. ಮುಂಬಯಿಯಲ್ಲಿದ್ದ ಮಗನಿಗೆ ಪ್ರತಿತಿಂಗಳ ಹಣಕಳಿಸಬೇಕು. ರಾಯರಿಗೆ ಯಾವ ವಿಚಾರವೂ ಹೊಳೆಯದಾಯಿತು. ವಿಚಾರದಿಂದ ತಲೆ ಭಾರವಾಗಿರಲು ರಾಯರು ಮನೆಯ ಕಡೆಗೆ ಸಾವುಕಾಶವಾಗಿ ಹೊರಟರು. ಸುತ್ತಲೂ ಕತ್ತಲು ಕವಿಯಬತ್ತಿತ್ತು!

ರಾಯರ ಮನೆಯ ಹಾದಿಯಲ್ಲಿಯೇ ಸಂಗಣ್ಣ ಶೆಟ್ಟರ ಅಂಗಡಿ. ರಾಯರು ಅಂಗಡಿಯ ಮುಂದೆ ಬರುವದಕ್ಕೂ ಶೆಟ್ಟಿ ಹೊರಗೆ ಬರುವದಕ್ಕೂ ಸರಿಹೋಯಿತು! ಶೆಟ್ಟಿ ಒಮ್ಮೆಲೆ "ರಾಯರs ಬರ್ರಿ....ಯಾಕೋ ಬಹಳ ಸೊರಗೀರಿ? ನಮ್ಮ ಕಡ್ಯಾಕ ಈಗ ಬರೋದ ಬಿಟ್ಟೀರಿ!" ಎಂದು ರಾಯರನ್ನು ಮಾತನಾಡಿಸಿದ.

"ಶೆಟ್ಟೀ ಮನಸ್ಸಿನ್ಯಾಗ ಆರಾಮ ಇಲ್ಲ....ನಡದದs ತೀರಿತು" ಎಂದು ನಿರುತ್ಸಾಹದ ಧ್ವನಿಯನ್ನು ಎಳೆದರು.

"ಬರ್ರೀ ಸ್ವಾಮಿರಾಯರ ಒಳ್ಯೇಕ. ಕುಂದರ್ರಿ...." ಎಂದು ಶೆಟ್ಟಿ ರಾಯರನ್ನು ಒಳಗೆ ಕರೆದ. ಅಂಗಡಿಯಲ್ಲಿ ಜನರೂ ಇರಲಿಲ್ಲ. ಈಗಾಗಲೇ ರಾತ್ರಿಯೂ ಆಗಿದ್ದಿತು; ರಾಯರು: "ಶೆಟ್ಟೀ ನಿನ್ನ ಸಾವಕಾರಿಕಿ ದಿನ ದಿನ ಬೆಳೀಲಿಕ್ಕೆ ಹತ್ತಿತು. ಆದರ ನನಗ ದುಡ್ಡಿನ ಕೊರತಿ ತಪ್ಪಲೊಲ್ಲದು" ಎಂದು ಲೋಡಿಗೆ ಆತು ಕುಳಿತು ನುಡಿದರು. ಶೆಟ್ಟಿ ಮುಗುಳು ನಗೆ ನಕ್ಕು:—

"ನಾ ಅದೀನಿ ನಿಮಗ್ಯಾಕ ರೂಪಾಯಿ ಚಿಂತಿ? ಎಷ್ಟು ಬೇಕು ಅಷ್ಟು ತೊಗಳರಿ" ಎಂದು ಒಮ್ಮೆಲೆ ನುಡಿದ.

"ಶೆಟ್ಟಿ ನಿನ್ನಂಥ ಗೆಳೆಯಾ ಇದ್ದರ ನನಗೇನ ಚಿಂತಿ?"

"ನಮಗೇನ್ರಿ ರಾಯರ ಸಾಲಾಕೊಡೋರು.... ತೊಗಳ್ರಿಲ ರೂಪಾಯಿ" ಎಂದ.

ಶೆಟ್ಟಿಯ ವ್ಯವಹಾರ-ಚಾತುರ್ಯ ರಾಯರಿಗೆ ಹೊಳೆಯಲಿಲ್ಲ. ಶೆಟ್ಟಿಯ ಕಡೆಯಿಂದ ಎರಡು ಸಾವಿರ ರೂಪಾಯಿ ಸಾಲವಾಗಿ ತೆಗೆದುಕೊಂಡು ಮನೆಗೆ ಬಂದರು.

ರಾಯರ ಮಗಳು, ಪದ್ಮೆಯು, ವಿವಾಹದ ಕಾರ್ಯ ದುಡ್ಡಿನ ತೊಂದರೆಯಲ್ಲಿ ಹಿಂದು ಬಿದ್ದಿತ್ತು. ರಾಯರು ಈಗ ಮದುವೆಯ ವಿಚಾರ ಮುಂದು-ವರಿಸಿದರು. ತಮ್ಮ ಹಿಂದಿನ ಬೀಗತನದ ಸಂಬಂಧ ಪುನಃ ನೆನೆದುಕೊಂಡು ತಮ್ಮ ಹೆಂಡತಿಯ ತಮ್ಮ ಶ್ಯಾಮನಿಗೆ ಮಗಳನ್ನು ಕೊಡುವದು ನಿಶ್ಚೈಸಿದರು. ಮನೆಯಲ್ಲಿ ಎಲ್ಲ ವ್ಯವಸ್ಥೆ ಮಾಡಿದರು. ವೈಶಾಖಮಾಸದಲ್ಲಿ ಲಗ್ನವಾಗತಕ್ಕದ್ದು. ರಾಯರ ಮಗನೂ ತನ್ನ ಪರೀಕ್ಷೆ ತೀರಿಸಿಕೊಂಡು ಊರಿಗೆ ಬಂದ. ಮದುವೆಯೂ ಆಯಿತು ! ಮಗಳನ್ನು ಅತ್ತೆಯ ಮನೆಗೆ ಕಳುಹಿ ರಾಯರೂ ಅವರ ಪತ್ನಿಯೂ ಸುಖವಾಗಿ ಕುಳಿತುಕೊಂಡರು. ಆದರೆ ಶೆಟ್ಟಿಯು ಮಾತ್ರ ತನ್ನ ಜಾಲ ಹೆಣೆಯುತ್ತಲೇ ಇದ್ದ ! ರಾಯರು ಶೆಟ್ಟಿಯನ್ನು ನಂಬಿದ್ದರು. ಆದರೆ ಆದಷ್ಟು ತೀವ್ರವಾಗಿ ಅವನ ಸಾಲ ತೀರಿಸಬೇಕೆಂದು ಯೋಚನೆಯನ್ನು ನಡಿಸಿದ್ದರು

ಒಂದು ದಿನ ಮುಂಜಾನೆ ರಾಯರು ಸ್ನಾನ ತೀರಿಸಿಕೊಂಡು ಪಡಸಾಲೆಯಲ್ಲಿ ಲೋಡಿಗೆ ಆತು ಕುಳಿತುಕೊಂಡಿದ್ದರು. ಮುಖದಮೇಲೆ ಸಮಾಧಾನದ ಕಳೆಯು ಎದ್ದು ಕಾಣುತ್ತಿತ್ತು ! ತಮ್ಮ ಬಾಯಿಯಲ್ಲಿಯೇ ಸಾವಕಾಶವಾಗಿ " ಹರಿನಿನ್ನೊಲಮೆಯು ಆಗೋತನಕ....ಅರಿತು ಸುಮ್ಮನಿರುವದು ಲೇಸು " ಎಂದು ಗುಣುಗುಟ್ಟುತ್ತಿರುವಾಗಲೇ, ನಿಂಗ, ಮಲ್ಲಪ್ಪ ಬಂದು ರಾಯರಿಗೆ ನಮಸ್ಕಾರ ಮಾಡಿದರು.

" ಯಾಕ ಮಲ್ಲವ್ವ ಏನ ಬೇಕಾಗಿತ್ತು ? " ಮಲ್ಲವ್ವ ನಿಂಗನ ಕಡೆಗೆ ನೋಡಿದಳು. ಮತ್ತೆ ರಾಯರು

" ನಿಂಗಾ ಮತ್ಯೇನ ಪೇಚ ತಂದೀದಿ ? "

ನಿಂಗ ನಗುತ್ತ ಕಟ್ಟೆಯ ಮೇಲೆ ಕುಳಿತುಕೊಂಡ. ಮಲ್ಲವ್ವ ಮುಂದೆ ಬಂದು " ಎಪ್ಪಾ ನಾ ಒಂದ ಮಾತ ಕೇಳತೇನ್ರಿ ಸಿಟ್ಟಾಗಬ್ಯಾಡ್ರಿ."

" ಏನs ಮಲ್ಲವ್ವ ನಾ ಎಂದರs ಸಿಟ್ಟ್ಯಾಗಿ ಮಾತ ಆಡೇನ ? ಇರಲಿ ಈಗ ಏನ ಬೇಕು ? "

ಮಲ್ಲವ್ವ ಸುತ್ತಲೂ ನೋಡಿ ಸಾವಕಾಶವಾಗಿ " ಎಪ್ಪಾ ನೀವು ಶೆಟ್ಟರ ಕಡೆ ಸಾಲಾ ತಂದೀರಂತ ! "

ಮಲ್ಲವ್ವನ ಮಾತು ಮುಗಿಯುವದರಲ್ಲಿಯೇ " ನಿನಗ ಯಾರ ಹೇಳಿದರು ಈ ಮಾತು ? " ಎಂದರು.

" ನಾ ನಿನ್ನೆ ಹೊಲದಿಂದ ಬರೋ ಮುಂದ ಶೆಟ್ಟರು ನಿಮ್ಮ ಹೆಸರು ತಗೊಂಡು ಒದರ್ಯಾಡಾಕ ಹತ್ತಿದ್ದರ್ರಿ....ಸಾಲಾ ವಯ್ದಿವರು ತಿರುಗಿ ಕೊಡ್ಲೇ ಇಲ್ಲ ಅಂತ "

ಈ ಮಾತನ್ನು ಕೇಳಿ ರಾಯರು ಮೌನವಾಗಿ ಕುಳಿತು ಬಿಟ್ಟರು. ದುಡ್ಡಿಗಾಗಿ ತಮ್ಮ ಮಾನ ಹೋಯಿತಲ್ಲ ಎಂದು ಮನಸದಲ್ಲಿಯೇ ನೊಂದರು. ಶೆಟ್ಟಿ ತಮ್ಮ ಮಿತ್ರನೆಂದು ನಂಬಿದ್ದರೂ—' ಶೆಟ್ಟಿ ತನ್ನ ಲೆಕ್ಕ ಬಿಡಲಿಲ್ಲ ' ಎಂಬ ಮಾತು ಅವರ ಹೃದಯಕ್ಕೆ ಬಲವಾಗಿ ಚುಚ್ಚಿತು; ರಾಯರು ಸುಮ್ಮನೆ ಕುಳಿತದ್ದು ಕಂಡು ನಿಂಗ:

" ಎಪ್ಪ ನಾ ಬಡವ, ನಿಮಗ ಗೊತ್ತs ಅಯಿತಿ. ಆದರ....s"

" ಆದರ ಏನೋ ನಿಂಗ " ಎಂದು ರಾಯರು ಮೌನ ಮುರಿದರು.

" ನಮ್ಮ ಅವ್ವನ ಪುಣ್ಯದಿಂದ....ಹಾಗ ದುಡುದು ಅಟ ಗಂಟ ಮಾಡೇನ್ರಿ....ನಿಮಗ....?"

" ನೆಟ್ಟಗ ಹೇಳೋ ನಿಂಗ....ಏನುಮಾಡಬೇಕಂತಿ ? "

" ಎಪಾ ನೀವು ಈ ಗಂಟು ಶೆಟ್ಟರಿಗೆ ಕೊಟ್ಟ ಬಿಡ್ರಿ....ನಿಮ್ಮ ಮಾನ ಅಂದರ ನಮ್ಮ ಮಾನ ಇದ್ದಾಂಗ್ರಿ ?"

ರಾಯರು ಮಲ್ಲವ್ವನ ಕಡೆಗೆ ನೋಡಿದರು. ಮಲ್ಲವ್ವ " ನೀವು....ಏನು ತಿಳಕೋ ಬ್ಯಾಡ್ರಿ....ನಿಮ್ಮ ಹತ್ಯಾಕ ನಮ್ಮ ಗಂಟಿದ್ರ....ನಮ್ಮ ಮನ್ಯಾಗ ಇದ್ದಾಂಗ್ರಿ, ನಿಮ್ಮ ಮ್ಯಾಲೆ ನಮ್ಮ ನಂಬಿಗೆ ಇಲ್ಲರೆ ?" ಎಂದು ನುಡಿದು ತನ್ನ ಪೂರ್ಣ ಸಮ್ಮತಿ ಕೊಟ್ಟಳು.

ತಾಯಿ ಮಗನ ಮಾತು ಕೇಳಿ ರಾಯರು ಧ್ಯಾನ ಮಗ್ನರಾದರು. ಒಮ್ಮೆ ಮನಸ್ಸು ಸರಳ ಜೀವನದ ನಿಂಗನನ್ನು ಕೊಂಡಾಡುತ್ತಿತ್ತು; ಮತ್ತೊಮ್ಮೆ ಶೆಟ್ಟಿಯ ಹೀನ ವೃತ್ತಿಗೆ ಹೇಸಿಕೊಳ್ಳುತ್ತಿತ್ತು. ಮಲ್ಲವ್ವ ಇದಾವದನ್ನು ಅರಿಯದೆ "ಎಪ್ಪಾ ಸಂಜೀನ್ಯಾಗ ಬರತೇವ್ರಿ" ಎಂದು ಮಗನನ್ನು ಕರೆದುಕೊಂಡು ಹೊರಟೇ ಬಿಟ್ಟಳು. ರಾಯರ ಮಡದಿ ನಡುಮನೆಯ ಬಾಗಿಲಿನಲ್ಲಿ ನಿಂತು ಮೌನವಾಗಿ ಕುಳಿತ ರಾಯರನ್ನು ನೋಡುತ್ತಲೇ ಇದ್ದರು.

ಮೌನದಲ್ಲಿಯೂ ಒಂದು ದಿವ್ಯ ಸಮಾಧಾನವಿಲ್ಲವೆ ?

---

# ಎರಡು....ದೃಷ್ಟಿ!

ದೀಪಾವಳಿಯು ಸಮೀಪಿಸಿದ್ದಿತು. ದೀಪಾವಳಿಯನ್ನು ನಾವು ಪಂಚಾಗ ನೋಡದೆ ತಿಳಿದುಕೊಳ್ಳಬಹುದು. ಅದು ಹೇಗೆ? ದೀಪಾವಳಿ ಪೂರ್ವರಂಗದ ಸುಳಿವು ನಮಗೇ ಗೊತ್ತೇ ಆಗುವದು. ಮನೆಯಲ್ಲಿ ಕರಚೀ ಕಾಯಿ, ಚಿರೋಟಿಗಳನ್ನು ಕರಿಯುವ ಕಮರು, ಇನ್ನೊ ಒಂದು; ದೀಪಾವಳಿ ಯಲ್ಲಿ ಕೋಲಾಟವಾಡ ಹೋಗುವ ನನ್ನ ತಂಗಿಯು ಹಾಡು ಗಟ್ಟಿಮಾಡು ವದು. ನಮಗೆ ದೀಪಾವಳಿಯ ವಿಷಯಕ್ಕೆ ಲಕ್ಷ್ಯವಿರದಿದ್ದರೂ....ಹುಡು ಗರಿಗೆ....ದೀಪಾವಳಿ ಬರುವುದು ಹುರುಪಲ್ಲವೇ? ನನ್ನ ಅಣ್ಣನ ಮಗ ಶ್ಯಾಮ ನನಗೆ ಆಕಾಶಪುಟ್ಟಿಗಾಗಿ ಹಲವು ಸಾರೆ ಹೇಳಿ,....ಅಳುವದು, ಇವೆಲ್ಲವುಗಳೂ ಪ್ರತಿ ವರುಷ ನನಗೆ ದೀಪಾವಳಿಯ ಬರುವಿಕೆಯನ್ನು ಸೂಚಿಸುವ ಚಿನ್ಹಗಳು.

ಇವೆಲ್ಲ ಚಿನ್ಹಗಳನ್ನುಬಿಟ್ಟರೆ ಈಗ Return Tickets for Diwali... ಎಂಬ ರೇಲ್ವೆ ಜಾಹೀರಾತುಗಳು ದೀಪಾವಳಿಯ ಆಗಮನವನ್ನು ಎಲ್ಲಕ್ಕಿಂ ತಲೂ ಹೆಚ್ಚು ಸ್ಪಷ್ಟವಾಗಿ ಸೂಚಿಸುತ್ತವೆ!

ನಾನೂ ಓದಿ ...ಓದಿ ...ಬೇಸತ್ತಿದ್ದೆ. Return ticket ತೆಗೆದು ಕೊಂಡು ಒಂದು ಪ್ರವಾಸ ಹೊಡೆದುಕೊಂಡು ಬರಬೇಕೆಂಬ ಆಸೆ ಪ್ರಬಲವಾ ಗಿತ್ತು. ಇಷ್ಟಲ್ಲದೆ ಇಚ್ಛೆಯಂತೆ ಅಭ್ಯಾಸವೂ ಮುಗಿದಿದ್ದಿತು. ಒಂದು ದಿನ ರೈಲ್ವೆಸ್ಟೇಷನ್‌ನಲ್ಲಿ Return ticket ನ ವಿಷಯ ವಿಚಾರಿಸಿಕೊಂಡು ಮನೆಗೆ ಒಂದೆ. ಅಂದು ರಾತ್ರಿ ತಂದೆಯವರ ಮುಂದೆ ಪ್ರವಾಸದ ಮಾತೆತ್ತಬೇಕೆಂದು ತಾಯಿಗೆ ಹೇಳಿಕೊಂಡೆ....ಬೇಕಾದರೆ ಬೇಡಿಕೊಂಡೆಯನ್ನಲೂ ಅಡ್ಡಿಯಿಲ್ಲ. ತಂದೆಗಿಂತ-ತಾಯಿಯ ಕರಳು ಹೆಚ್ಚಿನದಂತೆ. ಅದು ನಿಜ. ನಾನೇ ಕೇಳಿ ದ್ದರೆ....ಕೆಲಸವಾಗುತ್ತಿರಲಿಲ್ಲ ಸತ್ಯವಾಗಿ!

ಊಟದ ವೇಳೆಗೆ ಸರಿಯಾಗಿ ಅಡುಗೆ ಮನೆಗೆ ಬಂದು ನನ್ನ ಮಣೆಯ ಮೇಲೆ ಕುಳಿತುಕೊಂಡೆ. ಎಂದಿನಂತೆ ತಂದೆಯವರು ಮಡಿಯನ್ನುಟ್ಟು

ಮೊದಲಿನ ಮಣೆಯಮೇಲೆ ಕುಳಿತಿದ್ದರು.ಸಂಧ್ಯಾವಂದನೆಯ ಶಾಸ್ತ್ರವೂನಡೆ ದಿದ್ದಿತು ! 'ಕೇಶವಾಯನಮಃ....ಅಲ್ಲಾ ! ನೀ ಊಟಾ ಮಾಡುದಿಲ್ಲೇನು.... ಹರೇನಮಃ' ಎಂದು ಮಧ್ಯ ಮಧ್ಯ ಬೇರೆ ಮಾತುಗಳನ್ನು ಜೋಡಿಸುತ್ತಾ ತಂದೆಯವರು ಸಂಧ್ಯಾವಂದನೆಯನ್ನು ನಡೆಸಿದ್ದರು ! ಇರಲಿ—ಎಷ್ಟೆಂದರೂ ಸಂಧ್ಯಾವಂದನೆಗೆ ಇನ್ನೂ ಸ್ಥಾನವಿದೆಯಲ್ಲ ನಮ್ಮ ಮನೆಯಲ್ಲಿ !

ಏನೋ ತಂದೆಯವರ ಅಂಜಿಕೆಗೋ....ಅಥವಾ....ಮನೆತನದ ಮೂಲ ಭೂತ ಹಕ್ಕು ಕಳೆಯಬಾರದೆಂದೋ....ನಾನು, ಅಣ್ಣನೂ....ಎಂಜಲ ಮಣೆಯ ಮೇಲೆ ಕುಳಿತು ಮೂರು ಸಾರೆ ಆಚಮನದ ಶಾಸ್ತ್ರ ಮುಗಿಸಿ 'ಹಂತಿ-ತಿರುವಿ' ಊಟ ಪ್ರಾರಂಭ ಮಾಡುತ್ತಿದ್ದೆವು.

ಅತ್ತಿಗೆ ಬಡಿಸುತ್ತಿದ್ದಳು. ಅಂದು ಗುರುವಾರ. ತಾಯಿಗೆ ಉಪವಾಸ. ನಮ್ಮ ತಾಯಿ ಅಣ್ಣನ ಮಗುವನ್ನು ತೊಡೆಯಮೇಲೆ ಹಾಕಿಕೊಂಡು ಏನನ್ನೋ ಮಾತಾಡುತ್ತ ನಮ್ಮ ಹತ್ತಿರದಲ್ಲಿಯೇ ಕುಳಿತಿದ್ದರು.

ಸ್ವಲ್ಪ ಹೊತ್ತಾಯಿತು. ತಾಯಿ ನನ್ನ ಪ್ರವಾಸದ ವಿಷಯದ ಮಾತ ನ್ನೆತ್ತಲೇ ಇಲ್ಲ. ನನಗೆ ಊಟ ಸಾಗದಾಯಿತು. ಮರುದಿನವೇ ಪ್ರವಾಸಕ್ಕೆ ಹೊರಡಬೇಕೆಂದು ಎಲ್ಲವನ್ನೂ ಸಿದ್ಧಮಾಡಿಟ್ಟಿದ್ದೆ. "ಯಾವ ಕೆಲಸ ಮಾಡಿ ದರೂ ಮಾಡಬಹುದು. ಆದರೆ ದುಡ್ಡಿನ ಕೆಲಸ ಮಾತ್ರ ಬಲು ಕಠಿಣ" ಎಂದು ತಂದೆಯವರು ಹಲವು ಸಲ ನುಡಿದದ್ದು ನನಗೆ ನೆನಪಾಯಿತು. ಪ್ರವಾಸಕ್ಕೆ ಹೋಗಲು ನನಗೆ ಹಣ ಕೊಡುವವರೂ ಇಲ್ಲವೊ ಎಂದು ನಾನು ಒಳಒಳಗೆ ಕಳವಳಿಸುತ್ತಲೇ ಊಟ ನಡೆಸಿದ್ದೆ. ಒಮ್ಮೆಲೇ ತಾಯಿಯವರು ಶಾಮುನನ್ನುದ್ದೇಶಿಸಿ 'ರಾಮುನ ಸಂಗಡ ಮುಂಬಯಿಗೆ ಹೋಗಿಯಂತ- ಊಟಾ ಲಗೂ ಲಗೂ ಮಾಡು' ಎಂದು ನುಡಿದರು. ಇಷ್ಟು ತಾಯಿಯವರ ಬಾಯೊಳಗಿನಿಂದ ಹೊರಬೀಳುವದೊಂದ ತಡ, ಅಣ್ಣಾ 'ಏನೋ-ರಾಮು- ಮುಂಬಯಿಗೆ-ಹೋಗೋ ತಯಾರಿ ಮಾಡಿಬಿಟ್ಟೆಯಲ್ಲ ? ನನ್ನ 'ಹೊಲ್ಡಾಲ್' ಯಾಕ ತೊಗೊಂಡಿ, ಬೇಕಾದರ ಆಕೇದು ತೊಗೊ-ತುಸು ದೊಡ್ಡದದ !' ಎಂದು ನುಡಿದನು.

ತಂದೆಯವರಿಗೆ ಇದೆಲ್ಲವೂ ಆಶ್ಚರ್ಯವೆನಿಸಿರಬೇಕು. ತಾಯಿಯೂ ಅಣ್ಣನೂ ನಾನು ಪ್ರವಾಸಕ್ಕೆ ಹೋಗಲು ಸಮ್ಮತಿ ಕೊಟ್ಟಿದ್ದಾರೆ ಎಂದು

ಭಾವಿಸಿದರೋ ಏನೊ ? ' ಎಷ್ಟು ಖರ್ಚು ಹಿಡಿತದೊ ರಾಮು ' ಎಂದು ಆತ ಸಮಾಧಾನದಿಂದ ಕೇಳಿದರು.

ನೋಡಿ, ಯಾವ ವಿಷಯವನ್ನೂ ವಿಚಾರಮಾಡದಲೆ ಹೇಳುವದು ಕಠಿಣ. ಆದರಲ್ಲಿಯೂ ಇದು ರೊಕ್ಕದ ವಿಷಯ ! ಅಂದಬಳಿಕ ನಾನು-ಯೋಚನೆಮಾಡಲು ಅವಧಿ ಸಿಗಲೆಂದು ಒಂದು ಲೋಟ ನೀರನ್ನೆತ್ತಿದೆ ! ತಂದೆಯವರು ನನ್ನ ಕಡೆಗೊಮ್ಮೆ ನೋಡಿ ಮತ್ತೆ ಪುನಃ ನುಡಿದರು.

' ನೀ ಒಬ್ಬನ ಹೋಗುತಿಯೊ ಯಾರಾದರೂ ಜೋಡಿಯಾಗಿದ್ದಾರೊ-ರಾಮು ?' ಎಂದರು

ಈ ವಾಕ್ಯದ ಅರ್ಥವನ್ನು ತಾಯಿಯವರು ಬೇರೆ ತಿರುಗಿಸಿ ನಗುಮುಖದಿಂದ ' ಈಗೆಲ್ಲಿ ಜೋಡಿ ? ಮುಂದಿನ ವರುಷ-ಬರತಾಳಲ್ಲ ! ಆಗ-ಜೋಡಿಯಾಗಿ ಹೋಗುವದು ! ಯಾಕೊ ರಾಮು ?' ಎಂದು ನಕ್ಕರು.

' ಹ-ಹ-ಹ-ಹಾ-ಕಿವುಡಿಗೊಂದು-ಆ ಅನ್ನೊ ಚಟ ಇದ್ದಾಂಗ ಈಕೆಗೆ....ಲಗ್ನದ್ದೊಂದು ಹುಚ್ಚು !' ಎಂದು ತಂದೆಯವರು ಅಣ್ಣನವರ ಕಡೆಗೆ ಮುಖತಿರುವಿ ಮಾತನಾಡಿದರು. ನನ್ನ ಅಣ್ಣನ ಲಗ್ನವಾಗಿ ಎಂಟು ವರುಷಗಳಾಗಿ ಹೋಗಿದ್ದವು. ಅವರೂ ಸಂಸಾರಕ್ಕೆ ಬೇಸತ್ತಿರಬೇಕು. ಈಗಾಗಲೇ ಮೂವರು ಮಕ್ಕಳವರಿಗೆ, ಅವರೂ ನಿರಾಳವಾಗಿ ನುಡಿದರು. ' ನನಗೊಂದು ಗಂಟ್ಹಾಕಿ ಇಟ್ಟಾಳ. ಇನ್ನು....ರಾಮುಗೊಂದು....ಕೊರಳಿಗೆ....ಕಟ್ಟಿದಳಂದರ....ಆಕಿ....ತೊಡೀಮ್ಯಾಲೆ ಹನ್ನೆರಡು ತಾಸೂ ಕೂಸ ಕೂಸೂ !!' ಅಣ್ಣನ ತತ್ವಜ್ಞಾನಕ್ಕೆ ಅತ್ತಿಗೆ ಮುಗುಳು ನಗೆ ನಗುತ್ತಾ ನಿಂತು ಬಿಟ್ಟರು. ನಾನು ಲಗ್ನದಮಾತನ್ನು ಮರೆಸಿ ೭೫ ರೂಪಾಯಿಗಳು ಸಾಕೆಂದು ಅತಿ ಸಾವಕಾಶ ನುಡಿದೆನು. ಊಟ ಮುಗಿಯಿತು. ಅಂದಿನ ರಾತ್ರಿಯಲ್ಲವೂ ಪ್ರವಾಸದ ತಯಾರಿ ಸಾಗಿತೆನ್ನಿ ! ಮರುದಿನ ನಾಲ್ಕು ಗಂಟೆಯವರೆಗೆ.... ಊರಲ್ಲಿ ನನ್ನ ಗೆಳೆಯರಿಗೆ ಭೆಟ್ಟಿಯಾಗಿ ಅವರಿಗೆಲ್ಲಾ ಪ್ರವಾಸದ ಸುದ್ದಿ ಹೇಳಿಕೊಂಡು ಬಂದೆ.

ಗಾಡಿಯ ವೇಳೆಯಾದ್ದರಿಂದ ನಮ್ಮ ಆಳು " ಲಿಂಗ " ಟಾಂಗೆಯವನನ್ನು ಕರೆತಂದ. ರಾತ್ರಿಗಾಗಿ ದಶಮಿ ಡಬ್ಬಿಯು ಸಿದ್ಧವೇ ಇತ್ತು ! ನಾನು ಹೊರಡುವ ಮುಂದೆ ಶ್ಯಾಮಾ-ನಮ್ಮ ಅಣ್ಣನ ಮಗ-ಗುರುಗುಟ್ಟುತ್ತ ನಮ್ಮ

ತಾಯಿಯ ಸೀರೆಯ ಸೆರಗನ್ನು ಜಗ್ಗಹತ್ತಿದನು. ತಾಯಿ ಗಟ್ಟಿಯಾಗಿ "ಶ್ಯಾಮಗೆ....ಮೋಟರ....ತೊಗೊಂಡು ಬಾರೋ....ರಾಮೂ" ಎಂದರು. ನಾನು ಅಗತ್ಯವಾಗಿ "ಅತ್ತರ ತರೂದಿಲ್ಲ ಮತ್ತs ಆ....ಅತ್ತರ ಪತ್ರಾ ಬರದು ಬಿಡು" ಎಂದು ನಗುತ್ತ ಟಾಂಗೆಯಲ್ಲಿ ಕುಳಿತುಕೊಂಡೆ.

ಸ್ಟೇಶನ್ನು ಮುಟ್ಟಿದ್ದಾಯಿತು. ಒಂದು ಪ್ರಶಸ್ತವಾದ ಕಂಪಾರ್ಟಮೆಂಟ್ ಹುಡುಕಿ ಕುಳಿತುಕೊಂಡೆ. ಗಾಡಿಯು ಬಿಟ್ಟಿತು. ನಾನು ಮೊದಲು ಏನು ಮಾಡಬೇಕೆಂಬುದು ಹೊಳೆಯದೆ ಕಿಟಕಿಯಲ್ಲಿ ತಲೆಹಾಕಿ ನನ್ನೂರಿನ ರಮಣೀಯತೆಯನ್ನು ನೋಡಹತ್ತಿದೆ, ಗಾಡಿಯು "ಗಡ-ಗಡ್-ದಢ-ದಢ್" ಎನ್ನುತ್ತ ನಮ್ಮೂರ ಸೀಮೆ ದಾಟಿ ಹಾದಿ ಹಿಡಿಯಿತು. ಎಷ್ಟು ಹೊತ್ತು ಹಾಗೆಯೇ ನಿಂತುಕೊಳ್ಳುವದು ? ಸಾಕಾಗಿ ಕುಳಿತುಕೊಂಡೆ. ಒಂದು ಕಾದಂಬರಿಯನ್ನು ಓದಲು ಹತ್ತಿದೆ. ಕಾದಂಬರಿಯೇನೋ ರಸಭರಿತವಿದ್ದರೂ ನಿರಸವಾಗಿಯೇ ತೋರಿತು ನನಗೆ. ಅದೆಕೋ....ನಾನರಿಯೆ....ನನ್ನ ಸಂಗಡ ಈಗ ಒಬ್ಬ ಗೆಳೆಯನಿದ್ದಿದ್ದರೆ ಬೇಸರಿಕೆಯೆನಿಸಲು ಸಾಧ್ಯವೇ ಇರಲಿಲ್ಲ. ಕಂಪಾರ್ಟಮೆಂಟಿನಲ್ಲಿ ತುಂಬಿದ್ದವರು ಮರಾಟಿಯವರು. ಅವರ ಜೊತೆಗೆ ನಮ್ಮ ಕನ್ನಡದ ಭಾಷೆ ನಡೆದೀತೆ ? ಅದರಲ್ಲಿಯೂ ಅವರು ಧಾರವಾಡದಲ್ಲಿ ವಾಸಮಾಡಿದವರೇ....ಅಂದ ಬಳಿಕ ?

ಗಾಡಿಯು ಸಾಗಿಯೇ ಸಾಗಿತು....ನನ್ನ ಗೋಣ ಅಲುಗಾಡಿಯೇ ಅಲುಗಾಡಿತು ! ತೂಕಡಿಸಿ ಎದೆಯ ಮೇಲೆ ನನ್ನ ಪುಸ್ತಕವನ್ನಿಟ್ಟು ಮಲಗಿಕೊಂಡೆ. ಎಷ್ಟು ಸ್ಟೇಷನ್ನುಗಳು ಹೋದವೋ ನಾನರಿಯೆ. ರಾತ್ರಿ ಎಂಟು ಗಂಟೆಯಾಗಿರಬಹುದು. "ಮಿರಜ" ಸ್ಟೇಶನ್‌ದಲ್ಲಿಯ ಗದ್ದಲಕ್ಕೆ ಎಚ್ಚತ್ತೆ. ನಾನು ನನ್ನ ಫಲಹಾರದ ಡಬ್ಬಿಯಲ್ಲಿದ್ದದ್ದನ್ನು ಪೂರೈಸಿಕೊಂಡು ಪ್ಲ್ಯಾಟ್ ಫಾರ್ಮದ ಮೇಲೆ ಅಲೆದಾಡಿದೆ. ಹಸಿರು ಕೆಂಪು ದೀವಿಗೆಯ ಗಾರ್ಡರೂ ಅಡ್ಡಾಡಿಯೇ ಅಡ್ಡಾಡಿದರು. ಹುಡುಗರಂತಹ ಪೀಪಿ ಊದಲೇಯಿಲ್ಲ ! ಆದರಲ್ಲಿ ಅದು 'ಜಂಕ್ಷನ್' ಸ್ಥಳ ! ಬಿಡುವ ವೇಳೆ ೮-೪೦ ಕ್ಕೆಂದು 'ಗೈಡ್' ನಲ್ಲಿ ಇದ್ದದ್ದು; ಗಾಡಿ ಬಿಟ್ಟಿದ್ದು ೧೦ ಗಂಟೆಗೆ ಸರಿಯಾಗಿ; ಅಂತು ವೇಳೆಯ ಮಹತ್ವವನ್ನು ಕಲಿತುಕೊಂಡರೆ ರೈಲ್ವೆ ಕಂಪನಿಯಿಂದಲೇ ಕಲಿತುಕೊಳ್ಳಬೇಕು !!

ರಾತ್ರಿಯೆಲ್ಲವೂ ಗಾಡಿಯು ಅಲ್ಲಲ್ಲಿ ನಿಲ್ಲುತ್ತ ತೂಕಡಿಸುತ್ತ ಪ್ರಯಾಸದಿಂದ ಜಗ್ಗುತ್ತಿತ್ತು. ನಾನೂ ನನ್ನ ಹಾಸಿಗೆಯ ಮೇಲೆ ಒರಗಿಕೊಂಡೆ. ನನ್ನ ಎಡದ ಕಡೆಯ "ಸೀಟಿನ" ಮೇಲೆ ಒಬ್ಬಳು ಒಂದು ಕೂಸಿನೊಂದಿಗೆ ಮಲಗಿದ್ದಳು. ಬಹುತರ ಗಾಡಿಗಳಲ್ಲಿ ಹುಡುಗರು ಅಳುವ ರೂಢಿ....ಮೇಲೆ.... ಮೇಲೆ ಅಲಾರಂ ಹೊಡೆದಂತೆ ನಮ್ಮನ್ನು ಎಚ್ಚರಗೊಳಿಸುತ್ತಿತ್ತು ಆ ಕೂಸು! ಸಂಸಾರ ಎಲ್ಲಿ ಹೋದರೂ ಬಿಟ್ಟಿದ್ದಲ್ಲವಲ್ಲ ! ವೀರ ವಿಶ್ವಾಮಿತ್ರನಂಥ ಘೋರ ತಪಸ್ವಿಗೆ ಶಕುಂತಲೆಯ....ರೋದನ ಸ್ವರ ತಪ್ಪಲಿಲ್ಲ. !....ಅಂದ ಬಳಿಕ.... ನಮ್ಮ....ನಿಮ್ಮ....?

ಮೂಡಣದಿಕ್ಕು ನಸುಗೆಂಪಿನಿಂದ ರಂಜಿತವಾಗಿತ್ತು. ತಂಗಾಳಿ.... ಸಿಳ್ಳೆಂದು ಬೀಸುತ್ತಿತ್ತು. ಗಾಡಿಯು-ಮಧ್ಯ ಮಧ್ಯ ಕಿರುಚುತ್ತ ತನ್ನ ಕಪ್ಪಾದ ಹೊಗೆಯನ್ನು ಕಾರುತ್ತ ನಡೆದಿತ್ತು. ಯಾವದೋ ಒಂದು ಚಿಕ್ಕ ಸ್ಟೇಶನ್ನು ಅಡವಿಯ ಮಧ್ಯದಲ್ಲಿ ಸೇರಿಕೊಂಡಿತ್ತು. ರೈಲು ಅಲ್ಲಿ ನಿಂತಿತು. ನಾನು ಚಹ ಕುಡಿದೆ.

ಹೀಗೆ ಅತಿ ಬೇಸರಿಕೆಯಿಂದ ಗಾಡಿಯಲ್ಲಿ ಪ್ರವಾಸವನ್ನು ಮುಗಿಸಿ ಸಂಜೆ ೪ ಗಂಟೆಗೆ ಮುಂಬಯಿ ಪಟ್ಟಣ ಸೇರಿಕೊಂಡೆ. ಮುಂಬಯಿ ವರ್ಣನೆಯನ್ನು ಮಾಡುವದು ನನಗೆ ಇಲ್ಲಿ ಬೇಕಿಲ್ಲ—ನೀವು ಹಲವರು ನೋಡಿರಲಿಕ್ಕೆ ಸಾಕು. ನಾನು ತಪ್ಪಿ ಏನನ್ನಾದರೂ ಹೇಳುವದು-ಅದು ಬೇಡವೇ ಬೇಡ. ಮೊದಲೇ ತಂತಿಯಿಂದ ನನ್ನ ಗೆಳೆಯನಿಗೆ ತಿಳಿಸಿದ್ದೆನಾದ್ದರಿಂದ-ಗೋಪು ಸ್ಟೇಶನದಲ್ಲಿ "Wel-Come" ಮಾಡಲು ನಿಂತಿದ್ದ. ಈರ್ವರು ಟ್ರಾಮ್‌ನಲ್ಲಿ ಕುಳಿತು-ಕಾಲೇಜ ಹಾಸ್ಟೆಲಿಗೆ ಹೋದೆವು. ವಾಡಿಕೆಯಂತೆ-ನನ್ನ ಗೆಳೆಯ ತನ್ನ ಗೆಳೆಯರ ಗುರುತು ಮಾಡಿಕೊಟ್ಟ. ನಾನು ಏಳೆಂಟು ದಿವಸ ಸುಖವಾಗಿ ಮುಂಬಯಿಯಲ್ಲಿ ಕಳೆದು ಪುನಃ ನನ್ನೂರಿಗೆ ಹೊರಡಬೇಕೆಂದು-ನನ್ನ ಗೆಳೆಯನನ್ನು ವಿಚಾರಿಸಲು ಅವನು "ನಾನೂ ಪುಣೆಯವರೆಗೆ ಬರುತ್ತೇನೆ. ಪುಣೆಯಲ್ಲಿ ಎರಡು ದಿವಸ ನಿಂತು ಊರಿಗೆ ಹೋಗಬಹುದು" ಎಂದನು. ಅಂದು ಸಂಜೆಗೆ ನಾವು ಪುಣೆಗೆ ಹೊರಟೆವು. ನನ್ನ ಗೆಳೆಯನು ತನ್ನದೇನೋ ಕೆಲಸವಿರುವದೆಂದು ಬೇರೊಬ್ಬರ ಮನೆಗೆ ಹೋದನು. ನಾನು ಮಾತ್ರ 'ಸ್ಟೇಶನ್‌ಕ್ಕೆ ಅತಿ-ಸಮೀಪದಲ್ಲಿರುವ 'ಮಾಧವಾಶ್ರಮ' ಎಂಬ ಹೊಟೇಲಿನಲ್ಲಿ ಇಳಿದುಕೊಂಡೆ.

ಊಟ ಮುಗಿಸಿಕೊಂಡು ಸಂಜೆಯ ಸಮಯಕ್ಕೆ ಊರೊಳಗೆ ತಿರುಗಾಡುವದಕ್ಕೆ ಹೊರಟೆ. ಪುಣೆಯಲ್ಲಿ ಅತ್ತ ಇತ್ತ ನೋಡಿದಲ್ಲಿ ಹಾಯ್‌ಸ್ಕೂಲಗಳು ಮತ್ತು ಕಾಲೇಜುಗಳು ! ನಾನು ಹಾಗೆ ಅಲೆದಾಡಿ 'ಫರ್ಗ್ಯೂಸನ್ ರೋಡು' ಹಿಡಿದು ಬರುತ್ತಿದ್ದೆ. ಅಲ್ಲಿ ಸಾಲು ಮನೆಗಳ ಮಧ್ಯದ ಕಟ್ಟೆಯ ಮೇಲೆ ಓರ್ವ ಹೆಣ್ಣು ಮಗಳನ್ನು ಕಂಡೆ. ಅದು ಎಂದೋ ನೋಡಿದ ಮುಖ! ಅದರಲ್ಲಿಯೂ ಈಗ ಅವಳು ಯೌವನದಿಂದ ತುಂಬಿದ ದೇಹದಿಂದ, ಗುರುತಿಸಲು ಕೂಡ ಬರುವಂತಿದ್ದಿಲ್ಲ. ನೋಡಿ ಮಾತನಾಡಿಸುವದೆಂತು ? ನಾನು ಹಾಗೆಯೇ ಮುಂದಕ್ಕೆ ಸಾಗಿದೆ. ಅಷ್ಟರಲ್ಲಿಯೇ ಒಂದು ಚಿಕ್ಕ ಹುಡುಗನು ಬಂದು ನನ್ನನ್ನು ತಳ್ಳಿ "ಅಲ್ಲಿ ಬರ್‍ರಿ....ನಿಮ್ಮನ್ನು ಕರೆಯುತ್ತಾರೆ" ಎಂದನು. ನನಗೆ ಆಶ್ಚರ್ಯವಾಯಿತು. ಪುಣೆಯಲ್ಲಿ ಕನ್ನಡ ಮಾತಾಡಿಸಿ ಕರೆಯುತ್ತಿದೆ ಹುಡುಗ! ಇವರು ಕನ್ನಡ ನಾಡಿನವರಿರಬಹುದೆಂದು ಭಾವಿಸಿ ಹುಡುಗನ ಬೆನ್ನುಹತ್ತಿ ಹೊರಟೆ. ನಾನು ಮನೆಯ ಮುಂದೆ ಬರುತ್ತಲೆ ಆ ಹೆಣ್ಣು ಮಗಳು "ಯಾಕ ರಾಮಣ್ಣ, ನನ್ನ ಗುರುತು ಹತ್ತಲಿಲ್ಲವೇ-ನೋಡಿ ಹಾಗೆಯೇ ಹೋದಿ ?" ಎಂದಳು. ನನಗೆ ಹಿಂದಿನ ನೆನಪು ಆಯಿತು. ಹಿಂದೆ ನಮ್ಮ ಮನೆಯ ಹತ್ತಿರವೇ ಆ ಹೆಣ್ಣುಮಗಳ ತಂದೆಯವರು ಇದ್ದರು. ಇವರ ಮನೆಯವರಿಗೂ ನಮಗೂ ಪರಿಚಯ. ಈ ಹೆಣ್ಣುಮಗಳು—ಸಣ್ಣವಳು—ಆಗ. ಹಿಂದಿನ ವಿಚಾರ ನೆನೆದರೆ ನನಗೆ ನಗು ಬರುತ್ತಿದೆ—ಈ ಕಮಲುವನ್ನು ನಾನು ಎಷ್ಟೋ ಸಲ ಹೊಡೆದು ಅವರ ತಾಯಿಯಿಂದ ಪೆಟ್ಟು ತಿಂದಿದ್ದೇನೆ. ಇದಕ್ಕೂ ಹೆಚ್ಚಿನ ಗುರುತು ಬೇಕಿನ್ನೇನು ? ಮತ್ತೆ ಪುನಃ ಕಮಲುವೇ "ಬಾ ರಾಮಣ್ಣ ಒಳಗೆ" ಎಂದಳು. ನನಗೆ ಏನೂ ತೋಚದಾಯಿತು. "ನಾನು ಮಾಧವಾಶ್ರಮದಲ್ಲಿದ್ದೇನೆ ಮತ್ತೆ ಬರುತ್ತೇನೆ" ಎಂದು ಹೇಳಿ ಹೊರಟುಬಿಟ್ಟೆ.

ನಾನು ಮಾರನೆಯ ದಿನ ಮಧ್ಯಾಹ್ನ ಮಾಧವಾಶ್ರಮದಲ್ಲಿ ಊಟ ತೀರಿಸಿಕೊಂಡು ಮೇಲಂತಸ್ತಿನಲ್ಲಿ ಒಂದು ಕೊಟಡಿಯಲ್ಲಿ ವೃತ್ತ ಪತ್ರವನ್ನು ಓದುತ್ತಾ ಒರಗಿಕೊಂಡಿದ್ದೆ. ನನ್ನ ಎಡಕೈಯಲ್ಲಿಯ "Viceroy" ಸಿಗಾರೇಟ ಸಾವುಕಾಶವಾಗಿ ಆಕಾಶಕ್ಕೆ ಹೊಗೆ ತೂರುತ್ತಿತ್ತು.

ಊಟದ ಜಡತ್ವದಿಂದಲೋ ಅಥವಾ ತುಸು ಹೆಚ್ಚು ತಿರುಗಾಡಿದ್ದ ರಿಂದಲೊ ಆಯಾಸವಾದಂತಾಗಿ ಕಣ್ಣುಗಳು ತಾವೆ ಮುಚ್ಚುತ್ತಲಿದ್ದವು. ಮುಚ್ಚಿದ ಕಣ್ಣನ್ನು ತೆರೆದು ಸುತ್ತಲೂ ನೋಡಿ ಪುನಃ ಮಲಗಿಕೊಳ್ಳುತ್ತಿದ್ದೆ. ಹೀಗೆ ನಡೆದಿರಲು-ಒಬ್ಬ ಆಳು ನನ್ನ ರೂಮಿನ ಬಾಗಿಲು ಬಡಿದು-"ರಾಮ ರಾವ-ಧಾರವಾಡ ಅನ್ನುವವರು ತಾವೇ ಏನು ?" ಎಂದು ಪ್ರಶ್ನಿಸಿದ. ಯಾಕೆ-ನಾನೆ-ಯಾರಾದರು ಬಂದಿರುವರೋ ?" ಎಂದೆ. ಅಷ್ಟರಲ್ಲಿಯೇ ನನ್ನ ಓರಿಗೆಯವರೇ ಆದ ತುಸು ಎತ್ತರವಾದ ವ್ಯಕ್ತಿ "ರಾಮರಾವ-ನಮ್ಮ ಮನಿಗೆ ಬರಬೇಕು. ನನ್ನ ಹೆಂಡತಿ ತಮ್ಮ ಬಗ್ಗೆ ನನಗೆ ತಿಳಿಸಿದಳು. ಈ ಹೊತ್ತು ರಾತ್ರಿ ನಮ್ಮಲ್ಲಿಯೇ ಊಟಕ್ಕೆ ಬರಬೇಕಾಗಿ ವಿನಂತಿ" ಎಂದುಹೇಳಿ ಅತ್ತ ಇತ್ತ ನೋಡುತ್ತಿರಲು ನಾನು ಅವರಿಗೆ 'ಬನ್ನಿ, ಇಲ್ಲಿ ಕುಳಿತುಕೊಳ್ಳಿ' ಎಂದು ಹೇಳಿ ಮಾಧವಾಶ್ರಮದ ಹುಡುಗನಿಗೆ ಚಹಾ ತರಲು ಹೇಳಿ ಅವ ರನ್ನು ಪಕ್ಕದಲ್ಲೇ ಕೂಡಿಸಿ ಕೊಂಡೆ.

"ಕಮಲಕ್ಕನನ್ನು ನಾನು ನೋಡಿ ೭-೮ ವರುಷಗಳಾಗಿತ್ತು. ಅವರು ನನ್ನ ಗುರುತು ಹಿಡಿದದ್ದು ದೊಡ್ಡದು" ಎಂದೆ.

"ಅದರಲ್ಲೇನಿದೆ ರಾಮರಾವ ನಮ್ಮವರು ಬಂದರೆ....ಗುರುತು ಹತ್ತದೆ? ಎಂದರು ಅವರು.

ನಾನು "ತಾವು ಇಲ್ಲಿ ಏನು ಮಾಡುತ್ತ ಇದ್ದೀರಿ" ಎಂದು ಪ್ರಶ್ನಿಸಿದೆ.

"ನಾನೋ ? ಡಾಕ್ಟರ್. ಪ್ರ್ಯಾಕ್ಟಿಸ ತಕ್ಕಮಟ್ಟಿಗಿದೆ" ಎಂದರು.

ಇಷ್ಟರಲ್ಲಿಯೇ ಚಹಾ ಬಂದಿತು. ಈರ್ವರೂ ಅದನ್ನು ಸೇವಿಸಿ ಸಿಗ ರೇಟು ಹೊತ್ತಿಸಿದೆವು. ತುಸು ಆ ಮಾತು ಈ ಮಾತು ಆದಮೇಲೆ ಮತ್ತೆ ಡಾಕ್ಟರರು "ಆಯಿತು ರಾತ್ರಿ ೮|| ಗಂಟೆಗೆ ಟಾಂಗಾದಲ್ಲಿ ಬಂದುಬಿಡ್ರಿ" ಎಂದು ಹೊರಟರು.

ಏಳುವರೆ ಗಂಟೆಯಾಯಿತೆಂದು ಸೂಚಿಸಲು ಗಡಿಯಾರದಲ್ಲಿ ಠಣ್ ಎಂದು ಒಂದು ಬಾರಿ ಸದ್ದಾಯಿತು. ನಾನು ಹೋಟೆಲ್ಲಿನ ಬಿಸಿಲುಮಚ್ಚಿನ ಮೇಲೆ ನಿಂತು ರಸ್ತೆಯನ್ನು ನೋಡುತ್ತಿದ್ದೆ. ಸಾಯಿಕಲ್ಲುಗಳ ಮೇಲೆ ಹತ್ತಿ ಓಡುತ್ತಿರುವ ಕಾಲೇಜ್ ಸ್ಟೂಡಂಟರ ಮೋಜು!. ಬೀದಿಯ ಬೆಳಕಿನಲ್ಲಿ ಓಡಾಡುತ್ತಿರುವ ಬೆಡಗಿನ ಯುವತಿಯರ ದೃಶ್ಯ! ಹೀಗೆ ನಾನು ನೋಡುತ್ತ ನಿಂತಿರಲು ಬಾಗಿಲ ಬಳಿಯಲ್ಲಿ "ರಾವಸಾಬ" ಎಂಬ ಟಾಂಗಾದವನ ಧ್ವನಿ ಕೇಳಿಸಿತು. ನಾನು ಡ್ರೆಸ್ ಮಾಡಿಕೊಂಡು ಹೊರಟೆ.

ತುಸು ವೇಳೆಯಲ್ಲಿಯೇ ಹಲವಾರು ಬೀದಿಗಳನ್ನು ದಾಟಿ, ಟಾಂಗೆಯು ಆ ಮನೆಯ ಮುಂದೆ ನಿಂತುಕೊಂಡಿತು. ಒಳಗಿನಿಂದಲೇ " ಕಮ್ ಇನ್ " ಎಂದು ಡಾಕ್ಟರರು ಹೊರಗೆ ಬಂದು ಕೈ ಹಿಡಿದು ಕರೆದುಕೊಂಡರು. ಒಳಗೆ ಕೋಣೆಯಲ್ಲಿ ಹೋಗಿ ಈರ್ವರು ಕುಳಿತುಕೊಂಡೆವು. ಡಾಕ್ಟರರು ಮಾತಾಡಲು ಮೊದಲು ಮಾಡಿದರು. ಅಷ್ಟರಲ್ಲಿಯೇ ನನ್ನನ್ನು ಹಿಂದಿನ ದಿನ ಹಾದಿಯಲ್ಲಿ ಹೋಗುತ್ತಿದ್ದಾಗ ಕರೆದ ಪುಟ್ಟ ಮಗು ಬಂದು " ಮಾಮ ಊಟಕ್ಕ ಬಾ ''....ಎಂದಿತು. ಡಾಕ್ಟರರು ಪಕ್ಕನೆ ನಕ್ಕು ' ನಿನ್ನ ಮಾಮಾ ಯಾರೋ ' ಎಂದರು. ಆದಕ್ಕೆ ಮಗು ಮುಂದಕ್ಕೆ ಬಂದು ನನ್ನ ಕೈ ಹಿಡಿದು ಕೊಂಡಿತು.

ಅಂದು ಊಟವು ನೆಮ್ಮದಿಯಾಗಿ ಸಾಗಿತು. ಕಮಲು-ಅತಿ ಉತ್ಸುಕತೆಯಿಂದ ಬಡಿಸುತ್ತಿದ್ದಳು. ಊಟ ನಿಧಾನವಾಗಿ ಸಾಗಿತು. ನಾನು ಮನಬಿಚ್ಚಿ ಮಾತನಾಡುತ್ತಿದ್ದೆ ಡಾಕ್ಟರರೊಂದಿಗೆ. ಊಟ ಮುಗಿಯಿತು. ವೀಳೆಯನ್ನು ಮೆದ್ದು ನಾನು " ಆಯಿತು. ಡಾಕ್ಟರ ಅಪ್ಪಣೆ ಕೊಡ್ರಿ " ಎಂದೆ.

ಡಾಕ್ಟರರು ಒಳಗೆ ಹೋಗಿ ತಮ್ಮ ಪತ್ನಿಯನ್ನು ಕರೆತಂದರು. ಕಮಲು ತುಸು ಮುಗುಳು ನಗೆಯಿಂದ " ಇನ್ನ ಪುಣೆಗೆ ಬಂದಾಗ ನಮ್ಮ ಮನೆಗೇ ಬರಬೇಕು " ಎಂದಳು.

ನಾನು " ಆಗಲಿ " ಎಂದು ನಗುತ್ತ-" ಅದಕ್ಕೇನು ಕಮಲಕ್ಕ ನಿನ್ನ ಲಗ್ನದಲ್ಲಿ ನಾನಿರಲಿಲ್ಲ....ನಿಮ್ಮ ಪತಿಯ ಹೆಸರೇನು ?" ಎಂದೆ. ಅದಕ್ಕೆ ಆಕೆ ನಗುತ್ತ, ತನ್ನ ಮುದ್ದು ಮಗುವಿಗೆ 'ಹೇಳು ಕಿಟ್ಟು ಅವರ ಹೆಸರು' ಎಂದಳು. ಹೀಗೆಂದು ಅತಿ ಪ್ರೀತಿಯ ಭಾವದಿಂದ ತನ್ನ ಪತಿಯನ್ನೊಮ್ಮೆ ನೋಡಿ ಪುನಃ ತಿರುಗಿ ನನ್ನನ್ನು ಭ್ರಾತೃಭಾವದಿಂದ ನೋಡಿದಳು. ಒಂದೇ ನಿಮಿಷದ ದೃಷ್ಟಿಯಲ್ಲಿಯ ಬದಲಾವಣೆಯನ್ನು ಕಂಡು ನಾನು ಬೆರಗಾದೆ !

ಇದೆಲ್ಲವೂ ದೇವರ ಸೃಷ್ಟಿಯ ವೈಶಿಷ್ಟ್ಯ ವಲ್ಲದೆ ಮತ್ತಿನ್ನೇನು ? ಹೀಗೆ ವಿಚಾರಮಾಡುತ್ತಿರಲು ಅಷ್ಟರಲ್ಲಿಯೇ ಹೊರಗೆ ಟಾಂಗಾದವನು " ರಾವ ಸಾಬ " ಎಂದು ಕೂಗಿದ !

---

# ಗಂಗೆ ಅಳಿದ ಗಂಗಮ್ಮ



ಕನ್ನಡ ನಾಡು ಆರ್ಯದ್ರಾವಿಡ ಸಂಸ್ಕೃತಿಗಳನ್ನು ಅರಗಿಸಿಕೊಂಡು ತನ್ನದಾದ ಒಂದು ಉಚ್ಚ ಸಂಸ್ಕೃತಿಯಿಂದ ಬಹು ಪುರಾತನ ಕಾಲದಿಂದಲೂ ಕೀರ್ತಿಯನ್ನು ಪಡೆದಿದೆ. ಇಂತಹ ನಾಡಿನಲ್ಲಿ ಕಾಣುವ ಅವಶೇಷಗಳು ಒಂದೊಂದು ಹಿರಿಸಂಸ್ಕೃತಿಯ ಪ್ರತೀಕಗಳೇ ಎಂದು ಬೇರೆಹೇಳಬೇಕಾಗಿಲ್ಲ. ಹಳ್ಳಿ ಹಳ್ಳಿಗಳಲ್ಲಿ ದಂತ ಕಥೆಗಳಂತೂ ಹಿಂದಿನ ಜನರ ತ್ಯಾಗ, ಶೌರ್ಯ ಗಳನ್ನು ಇಂದಿಗೂ ಹೊಗಳುತ್ತಿವೆ. ಇಂತಹ ಒಂದು ದಂತ ಕಥೆಯನ್ನು ನಾನು ಇಲ್ಲಿ ಸಂಗ್ರಹಿಸಲು ಸಾಹಸ ಮಾಡಿದ್ದೇನೆ.

*                *                *                *

ನನ್ನ ತಾಯಿಯ ತವರೂರು ಕೊರ್ಲಹಳ್ಳಿ. ಅಲ್ಲಿ ನಮಗೊಂದು ಹೊಲ ಇದೆ. ನಾನು ಸಣ್ಣವನಿರುವಾಗಿನಿಂದ ಆ ಚಿಕ್ಕಹಳ್ಳಿಗೆ ವರುಷಕ್ಕೊಮ್ಮೆ ಹೋಗುತ್ತಲಿದ್ದೇನೆ. ತುಂಗಾತೀರದಲ್ಲಿ ನೆಲಸಿರುವ ಆ ಹಳ್ಳಿ ನನ್ನ ಮನಸ್ಸಿನ ಮೇಲೆ ಒಂದು ಬಗೆಯ ಆಕರ್ಷಣವನ್ನು ಮೊದಲಿನಿಂದಲೂ ಬೀರಿರುತ್ತದೆ. ಹಳ್ಳಿ ಸಣ್ಣದು. ಮುನ್ನೂರು ನಾನೂರು ಜನರು ಈಗ ಅಲ್ಲಿ ವಾಸಿಸುತ್ತಿರ ಬಹುದು. ಹೊಳೆಯ ಪಕ್ಕದಲ್ಲಿ ಒಂದು ಎತ್ತರವಾದ ದಿನ್ನಿ ಇದೆ. ಅಲ್ಲಿ ಹಾಳುಬಿದ್ದ ಕೋಟೆಯೊಂದು ಹಿಂದಿನ ಇತಿಹಾಸ ಸಾರುತ್ತಿದೆ. ಕೋಟೆಯ ಮಧ್ಯದಲ್ಲಿ ಈಗ ಪುರಾತನ ದೇವಾಲಯಗಳು ಮಾತ್ರ ಇವೆ. ಇನ್ನುಳಿದ ಮನೆಗಳನ್ನು ನಾವು ಈಗ ಅಲ್ಲಿ ಕಾಣುವಂತಿಲ್ಲ. ಹಾಳೂರ ಮಧ್ಯದಲ್ಲಿ ಹನು ಮನ ಗುಡಿಯೊಂದು. ಅದರ ಹತ್ತಿರವೇ ನಿಂತುಕೊಂಡ ಅಶ್ವತ್ಥವೃಕ್ಷ— ಆ ಪ್ರದೇಶಕ್ಕೆ ಮತ್ತಷ್ಟು ಕಳೆ ತಂದುಕೊಟ್ಟಿದೆ; ಒಬ್ಬರೇ ಅಲೆದಾಡುತ್ತ ಅಲ್ಲಿ ಹೋಗಿ ಕುಳಿತುಕೊಳ್ಳಬೇಕು. ಹಿಂದಿನ ದಿನಗಳಲ್ಲಿ ಬಾಳಿಹೋದ ಆ ಜನಾಂಗದ ಬಗ್ಗೆ ಮನಸ್ಸು ಅನೇಕ ವಿಚಾರಗಳನ್ನು ಊಹಿಸುತ್ತದೆ. ತುಸು ಮುಂದಕ್ಕೆ ಬಂದು ನದಿಯ ಘಟ್ಟವನ್ನು ಸೇರಿ, ಅಲ್ಲಿ ತುಂಗಾಪಾನ ಮಾಡಿ

ಕುಳಿತುಕೊಂಡಾಗ ಆಗುವ ಆನಂದ-ಏನು ಕೊಟ್ಟರೂ ಬಾರದು. ತುಂಗೆ ಪಶ್ಚಿಮದಿಂದ ಪೂರ್ವಕ್ಕೆ ಧಾವಿಸುತ್ತಾಳೆ. ತಿಳಿಯಾದ ನೀರು; ಆಕಾಶಕ್ಕೆ ದೂರದಲ್ಲಿ ಹೊಂದಿಕೊಂಡು ನಿಂತುಕೊಂಡ ಪಶ್ಚಿಮದ ದಿನ್ನೆಗಳು, ನದಿಯ ದಡದಲ್ಲಿ ಕಾಣುವ ಮಾವಿನ ತೋಪು-ಕವಿಹೃದಯಕ್ಕೆ ಕೈವಲ್ಯವನ್ನೇ ತಂದೊಡ್ಡುವವು.

ಹಿಂದಕ್ಕೆ "ಡಣಕ್ಕ ಮುದ್ದ"ನೆಂಬ ಮಹಾಪುರುಷನು ತುಂಗೆಗೆ ಅಣೆ ಕಟ್ಟು ಕಟ್ಟಲು ಅಲ್ಲಿ ಸಾಹಸ ಮಾಡಿದ್ದಾನೆ. ಆದರೆ ಅದು ಫಲಿಸಿಲ್ಲ. ಆ ಪ್ರದೇಶದಲ್ಲಿ ಬಂಡೆಗಲ್ಲುಗಳನ್ನು ಭೇದಿಸಿ ತುಂಗೆ ಅಬ್ಬರಿಸುತ್ತಾಳೆ. ಅದಕ್ಕೆ ಹಳ್ಳಿಗರು "ದಿಡಗು" ಎಂದು ಕರೆಯುತ್ತಾರೆ. ಮೊದಲಗಟ್ಟೆ ಎಂದು ಹೆಸರು ಇನ್ನೊಂದು ದಡದಲ್ಲಿರುವ ಹಳ್ಳಿಗೆ ಆಗ ಬಂದಿದೆ. ಅಲ್ಲಿ ಹನುಮನ ಗುಡಿಯು ಪ್ರಸಿದ್ಧವಿದೆ. ಇಂಥ ರಮ್ಯ ಪ್ರದೇಶದಲ್ಲಿ ಊರು ಕಟ್ಟಿಕೊಂಡ ಆ ಹಿಂದಿನ ಜನರ ರಸಿಕತೆ ಕೊಂಡಾಡುವಂತಹದು.

ಆ ಕೋಟೆಯ ಗೋಡೆಯ ಒಂದು ಪಕ್ಕವನ್ನು ತುಂಗೆಯು ಹೊಂದಿಕೊಂಡು ಹರಿಯುತ್ತಾಳೆ. ಕೋಟೆಯ ಗೋಡೆಯ ಮೇಲೆ ನಿಂತು ನೋಡಿದರೆ ಬಹುದೂರದ ವರೆಗೆ ರಮ್ಯವಾದ ದೃಶ್ಯವನ್ನು ಕಾಣಬಹುದು. ಮಳೆಗಾಲದಲ್ಲಿ ಪ್ರವಾಹವು ಹೆಚ್ಚಾಗಿ ಆ ಕೋಟೆಯನ್ನು ಸುತ್ತುಹಾಕುತ್ತದೆ. ಕೋಟೆಯ ಗೋಡೆಗಳು ಈಗ ಭದ್ರವಾದವುಗಳಿಲ್ಲ. ಆದರೆ ಹಿಂದೆ ಜನರು ಅವುಗಳನ್ನು ಭದ್ರವಾಗಿರಿಸಿಕೊಂಡು ನದಿಯು ಸುತ್ತುಗಟ್ಟಿದರೂ ಅಲ್ಲಿಯೇ ವಾಸಿಸುತ್ತಿದ್ದರು. ಪ್ರತಿವರುಷವು ಈ ಪ್ರಸಂಗವು ಬರುವದೇನೂ ತಪ್ಪಿದ್ದಿಲ್ಲ. ಹಿಂದಕ್ಕೆ ಒಂದು ಇಂಥ ಪ್ರಸಂಗವು ಬಂದಿತು. ಮಳೆಯು ಆ ವರುಷ ಬಹಳ ಬಿದ್ದು, ಮೇರೆದಪ್ಪಿ ನದಿಯ ನೀರು ಬಂದು ಕೋಟೆಯ ನಾಲ್ಕು ದಿಕ್ಕುಗಳನ್ನು ಸುತ್ತಿತು. ಹಾಗೂ ಕೋಟೆಯ ಹೆಬ್ಬಾಗಿಲಿನಿಂದ ಗ್ರಾಮಪ್ರವೇಶ ಮಾಡಿತ್ತು.

ಹೊಳೆ ಊರು ಹೊಕ್ಕಮೇಲೆ ಕೇಳಬೇಕೆ? ಜನರು ಭೀತರಾದರು. ಭೋರೆಂದು ಗರ್ಜಿಸುವ ನದಿಯು ತಮ್ಮನ್ನು ನುಂಗಲು ಹವ್ಯಾಸ ಪಡುತ್ತಿದೆ ಎಂದು ಜನರೆಲ್ಲ ನಂಬಿದರು. ಜನರೆಲ್ಲ ಹೌಹಾರಿ ತಮ್ಮ ಮಕ್ಕಳು ಮರಿಗಳ ಗತಿಯೇನೆಂದು ಕಣ್ಣೀರಿಡುತ್ತ ಬೀದಿಗಳಲ್ಲಿ ಅಲೆದಾಡಹತ್ತಿದರು. ಆಕಾಶದಲ್ಲಿ ಕಾರ್ಮೋಡಗಳ ತಾಕಲಾಟ-ಸಿಡಿಲು ಗುಡುಲಿನ ಗರ್ಜನೆಯಂತೂ

ಅವ್ಯಾಹತವಾಗಿ ಸಾಗಿಯೇ ಇತ್ತು. ಸಾಧ್ಯವಾದಷ್ಟು ಜನರು ಹರಗೋಲಿನಿಂದ ಪಾರಾಗಲು ಯತ್ನಿಸಿದರು. ಆದರೆ ವೇಳೆಗಳೆದಂತೆ ನೀರು ಇನ್ನೂ ಹೆಚ್ಚಾಯಿತು. ಕೋಟೆಯ ಗೋಡೆಯ ಮೇಲೆ ನಿಂತು ಊರ ಪಂಚರು ದಿಕ್ಕುಗಾಣದೆ ನೋಡುತ್ತಿದ್ದಾರೆ. ಒಬ್ಬರ ಮೋರೆಯ ಮೇಲೂ ತುಸು ಕಳೆಯಿಲ್ಲ! ಜಲಪ್ರಳಯವು ನಿಶ್ಚಯವೆಂದು ಅರಿತು ಹಿರಿಪಂಚ, ರಾಮಣ್ಣ "ಇದು ಹುಚ್ಚು ಹೊಳೆಯಪ್ಪ, ಮೊದಲಗಟ್ಟಿಯ ಹನುಮನ ಪಾದವನ್ನು ನೀರು ಮುಟ್ಟಿದೆ. ನಮಗೆ ಹನುಮನೇ ಗತಿ." ಎಂದು ನಿಟ್ಟುಸುರು ಬಿಟ್ಟು ಮೊದಲಗಟ್ಟಿಯ ಕಡೆಗೆ ಮೋರೆಮಾಡಿ ಕೈಜೋಡಿಸಿದ! ಕ್ಷಣಕಾಲ ಇನ್ನುಳಿದ ಜನ ಸುಮ್ಮನೆ ನಿಂತುಕೊಂಡಿತು ಅಲ್ಲಿಯೇ ಜನಸಂದಣಿಯಲ್ಲಿ ನಿಂತುಕೊಂಡ ಮುಪ್ಪಿನ ಮುದಕಿ ಮುಂದೆ ಬಂದು "ಎಪ್ಪಾ ಗಂಗೀ ಆಳಸಬೇಕರಿ ಅಂದರೆ ಗಂಗಮ್ಮ ಹಿಂದ ಸರಿತಾಳ" ಎಂದಳು. ಒಮ್ಮೆಲೆ ಹಿರಿ ಪಂಚ ರಾಮಣ್ಣನ ಮುಖದ ಮೇಲೆ ಮಿಂಚು ಮೂಡಿತು. ಅವನು ಕೋಟೆಯ ಗೋಡೆಯನ್ನಿಳಿದು, ಊರ ಚಾವಡಿಗೆ ಬಂದು ತನ್ನ ಇನ್ನುಳಿದ ಪಂಚರಿಗೆ ಹೇಳಿದ "ಗಂಗೆ ಆಳಿಯುವ ಗರತಿ ಯಾರಪ್ಪಾ ಸಿದ್ದಪ್ಪ ?" ಎಂದು ಪಂಚ ಸಿದ್ದಪ್ಪನನ್ನು ಕೇಳಿದ. ಸಿದ್ದಪ್ಪ ಬಹು ವಿನೋದಿ. "ಊರ ತುಂಬ ಗರತೇರಿದ್ದಾರ ಆದರ ಜೀವ ಕೊಡೋವಕ್ಕ ಯಾರ ಮುಂದ ಬರತಾರ ? " ಎಂದು ಅಂಥ ಗಂಭೀರ ವಾತಾವರಣವನ್ನೂ ಕೂಡ ಸಡಿಲಿಸಿದ !

ಕಾಯಾ ವಾಚಾ ಮನಸಾ ಶುದ್ಧಿ ಬೇಕೆಂದು ಹಿರಿಯರು ಹೇಳುತ್ತಾರೆ. ಹದಿಬದಿಯ ಧರ್ಮವಾದರೂ ಇದನ್ನು ಬಿಟ್ಟಿಲ್ಲ. ತ್ರಿಕರ್ಣ ಪೂರ್ವಕವಾಗಿ ಶುದ್ಧಳೆಂದು ವಿಶ್ವಾಸವಿದ್ದ ಗರತಿ ಗಂಗೆ ಆಳಿಯಬೇಕು ! ಎಂಥ ಪ್ರಸಂಗವಿದು ! ಊರ ಹೆಂಗಳೆಯರ ಪರೀಕ್ಷೆಯಕಾಲ. ಜನರೆಲ್ಲ ಗುಂಪು ಗುಂಪಾಗಿ ಚಾವಡಿಯ ಮುಂದೆ ನೆರೆದರು. ಮಾತಿಗೆ ಮಾತು ಪ್ರಾರಂಭವಾಗಿ ಕೊನೆಯ ನಿರ್ಧಾರ ಊರಲ್ಲಿ ಡಂಗುರ ಸಾರುವದೆಂದು ನಿಶ್ಚಯವಾಯಿತು. ಊರ ಹೊಲೆಯ ಡಂಗುರ ಸಾರುತ್ತಾ ಹೊರಟ. ಓಣಿಯ ಮಧ್ಯ ನಿಂತು "ಗರತಿ ಗಂಗಮ್ಮ ಬನ್ನಿ, ಗಂಗೆ ಆಳಿಯುವದಕ್ಕೆ" ಎಂದು ಕೂಗುವ ! ಮನೆಯೊಳಗಿನಿಂದ ಹೆಂಗಳೆಯರು ಮುಖಕೂಡ ಹೊರಗೆ ಹಾಕಲಿಲ್ಲ. ಬೀದಿ ಬೀದಿಗಳಲ್ಲಿ ನಡೆದು-ಚಾವಡಿಯ ಮುಂದೆ ಬಂದು ನಿಂತುಕೊಂಡು "ಊರಾಗ ಒಬ್ಬ

ಗರತಿ ಹೊರಡಲಿಲ್ಲ. ಎಪ್ಪ ಏನಿದು ದೈವ ?" ಎಂದು ನಿಟ್ಟುಸುರು ಬಿಟ್ಟು ಡಂಗುರದವ ನಿಂತುಕೊಂಡ ಪಂಚ ರಾಮಣ್ಣನ ಮೋರೆ ತೀರ ಕೆಟ್ಟಿತು. ಊರು ಮುಳಗುವದೇ ನಿಶ್ಚಯವೆಂದು ತಿಳಿದು, ಒಂದು ನಿಟ್ಟುಸುರು ಬಿಟ್ಟ. ಅಷ್ಟರಲ್ಲಿಯೇ ಸಿದ್ದಪ್ಪ ತುಸು ಮುಂದೆ ಬಂದು "ಏ ಹೊಲ್ಯಾ ನಿಮ್ಮ ಕೇರ್‍ಯಾಗ ಡಂಗುರ ಹೊಡದೇನು ? " ಎಂದ.

"ಇಲ್ಲ ದ್ಯಾವರು. ನಮ್ಮ ಕೇರ್‍ಯಾಗ ಏನ ಹೊರಡತಾರ್‍ರಿ ಗರತ್ಯಾರು ? ತುಂಬಿದ ಊರಾಗ ಒಬ್ಬ ಗರತಿ ಬಂದು ಗಂಗೀ ಅಳೀತೀನಿ ಅನಲಿಲ್ಲ." "ಛೀ ನಿನ ಮಂಜಾಳ ಹೋಗಾ. ಹೋಗು ಹೊಲಗೇರಿಗೆ. ಅಲ್ಲ್ಯಾ ಸಾರು ಡಂಗುರ." ಎಂದು ಸಿದ್ದಪ್ಪ ಅನ್ನುವಷ್ಟರಲ್ಲಿಯೇ ಡಂಗುರದ ದ್ಯಾವು ಓಡುತ್ತ ಹೊಲಗೇರಿಯ ಕಡೆಗೆ ಹೊರಟ.

ಡಂಗುರದ ದ್ಯಾವು ಓಡುತ್ತ ಓಡುತ್ತ ಕೇರಿಗೆ ಹೋಗಿ ಕೇರಿಯ ದ್ಯಾಮವ್ವನ ಗುಡಿಯ ಮುಂದೆ ನಿಂತು "ದ್ಯಾಮವ್ವನ ಸಾಕ್ಷಿಯಾಗಿ ಡಂಗುರ ಹೊಡೆತೀನಿ ನಮ್ಮ ಕೇರಿಯಾಗಿನ ಗರತೇರು ಬಂದು ಗಂಗಿ ಅಳಿರೆವ್ವೊ" ಎಂದು ಕೂಗಿ ಡಂಗುರದ ತಮ್ಮಟೆ ಬಾರಿಸಿ ನಿಂತು ಕೊಂಡ. ಐದು ನಿಮಿಷಗಳಾಗಿರಬಹುದು ಅವನ ನಿಂತುಕೊಂಡ ಸ್ಥಳದ ಹತ್ತರವೇ ಇದ್ದ ಗುಡಿಸಲೊಂದರೊಳಗಿಂದ ಒಬ್ಬ ಹೆಣ್ಣುಮಗಳು ಹೊರಗೆ ಬಂದಳು. ಏನು ಆಕಾರ ! ಹರಿದ ಅರಿವೆ ಮೈಮೇಲೆ ! ಕೂದಲು ಹರಡಿವೆ-ಆದರೆ ಮೂಗಿನಲ್ಲಿಯ ಮೂಗುತಿ ಧೈರ್ಯದಿಂದ ಸಾರುತ್ತಿದೆ ಇವಳು ಗರತಿ ಎಂದು ! ಗಂಗವ್ವ ಮುಂದಕ್ಕೆ ಬಂದು—

"ಏನು ದ್ಯಾಮಪ್ಪಾ-ಗರತೇರು ಯಾಕ ಬೇಕು?" ಎಂದು ತನ್ನ ಬಡ ಕಲಾದ ಕೂಸನ್ನು ಎತ್ತಿಕೊಳ್ಳುತ್ತ ಮಾತನಾಡಿದಳು.

"ಎವ್ವ ಗಂಗವ್ವ, ಏನು ಹೇಳೋದು—ಊರ ಮುಳಗತೈತಿ ! ನೀರ ಏರಾಕ ಹತ್ತೇತಿ ಕಾಣವಲ್ಲತ ?"

"ಏನರ ಽ ಹೇಳೋದೈತಿ ಹೇಳೆರ ಹೇಳಲಾ ?"

"ಗರತಿ ಬಂದು ಗಂಗಿ ಅಳಿಬೇಕು, ಅಂದರ ನೀರ ಹಿಮ್ಮೆಟ್ಟತೈತಿ ಮಾರಾಯಿತಿ !"

"ಮಡಿವಂತರು ಊರಾಗ ಇರೋಮುಂದ ನಮ್ಮ ಕೇರ್‍ಯಾಗ ಯಾಕ ಬಂದೆಪಾ !"

"ಊರೆಲ್ಲ ಮುಗಿಸಿದೆ. ಯಾರೂ ಬರಲಿಲ್ಲ ಅಂತ ಇಲ್ಲಿಗೆ ನನ್ನ ಕಳು ಹಿದರು ಪಂಚಸಿದ್ದಪ್ಪನವರು."

"ಎಣ್ಣಾ, ಹಾಂಗಾರ ನಾ ಅಳಿತೇನಿ ಗಂಗೀ ಅಂತ ಹೇಳಪಾ—ಯತ್ರಾ ಗಾದರು ಊರರ ಉಳಿಲಿ !"

"ಯವ್ವ—s ನೋಡಿ ಹೇಳು. ಅದು ಸಣ್ಣ ಹ್ವಾರೆವಲ್ಲ ! ಎಂಥೆಂಥ ವರೋ-ಹಿಂದ ಸರದಾಗು"

"ಇರಲಿ ಬಿಡs ಎಣ್ಣ! ನೀ ಹೇಳ ಸಿದ್ದಪ್ಪನವರಿಗೆ–ಹೊಲ್ಯಾರ ಗಂಗಿ "ಗಂಗೀ"—ಅಳಿತೇನಿ ಅಂದಳು ಅಂತ. ಗಡ ಹೋಗು ನಿಂದರ ಬ್ಯಾಡ" ಎಂದು ಅನ್ನುತ್ತ ತನ್ನ ಗುಡಿಸಲು ಹೊಕ್ಕಳು.

ದ್ಯಾಮ ಓಡುತ್ತ ಓಡುತ್ತ ಬಂದು ಸಿದ್ದಪ್ಪನ ಮುಂದ ನಿಂತು ಮುಜರೀ ಹೊಡೆದು "ಎಪ್ಪಾ ಕೆಲಸ ಆತು! ನಮ್ಮ ಕೇರಿ ಮಾನಾ ಉಳಸಿದ್ಲು ಗಂಗವ್ವ !"

"ಏನೋ ಯಾರು ಅಳಿತೇನಿ ಅಂದರು ಗಂಗೀನ ?" ಎಂದು ಪಂಚ ರಾಮಣ್ಣಾ ಎದ್ದು ನಿಂತು ಕೇಳಿದ.

"ಹೊಲಗೇರಿ ಒಳಗ ಗಂಗವ್ವ ಅದಾಳಲ್ಲರಿ, ನಮ್ಮ ಕರಿಯಾನ ಹೆಂಡತಿ ಆಕಿ....ಅಳಿತೇನಿ ಗಂಗೀನ ಅಂತ ಹೇಳ್ಯಾಳು."

ದ್ಯಾಮನ ಮಾತು ಕೇಳಿ ರಾಮಣ್ಣನಿಗೆ ಬಹಳ ಆಶ್ಚರ್ಯವಾಯಿತು. ಊರವಾನ ಯಾರಾದರೂ ಉಳಿಸಿದರಲ್ಲ ಎಂಬ ಸಮಾಧಾನ ಮುಖದ ಮೇಲೆ ಮೂಡಿತು ! ಸಿದ್ದಪ್ಪನ ಕಡೆಗೆ ಮೋರೆ ತಿರುವಿ ರಾಮಣ್ಣಾ ನುಡಿದ. "ಸಿದ್ದಪ್ಪ ಮುಂದೇನು ಮಾಡುವದು ?" "ಅದರಾಗ ಏನೈತಿ ನಾಳೆ ಮುಂಜಾನೆ ಗಂಗಿ ಅಳಸೋದು. ಆದರ ಕರಿಯಾನ ಕರಿಸಿ ಕೇಳಬೇಕು"! ಎಂದ ಸಿದ್ದಪ್ಪ. ಈ ಸುದ್ದಿ ಊರೆಲ್ಲ ಹಬ್ಬಿತು. ಊರ ಹೆಂಗಳೆಯರು ತಮ್ಮ ತಮ್ಮೊಳಗೆ ಗುಜುಗುಜು ಮಾತನಾಡಹತ್ತಿದರು. "ತುಂಗವ್ವ ಏನ ಮಾಡತಾಳೊ ಯಾರಿಗೆ ಗೊತ್ತು ? ಏನು ಆ ಹೊಲ್ಯಾರ ಗಂಗೀನ ಒಳಗ ಎಳಕೋತಾಳೊ?" ಎಂದು, ಜನರು ಗಂಗಿ ಅಳಿಯುವ ಕೆಲಸ ಬಹಳ ಕಠಿಣವಾದ ದ್ದೆಂದು ನುಡಿಯ ತೊಡಗಿದರು. ನೆರೆದ ಹೆಣ್ಣುಗಳೆಲ್ಲ ಒಂದೊಂದು ಮಾತ ನಾಡಿದವು. ಓರ್ವಳು "ಗಂಗೀ ಅಳಿಯೋದು ಬಹಳ ಕಠಿಣ. ತುಸು ಏನಾ ದರೂ ಹೆಚ್ಚು ಕಡಿಮೆಯಾದರ—ಹೊಳಿ ಅಳಿಯುವವಳನ್ನು ಒಳಗ ಎಳಕೋ

ತದ—ಜೀವ ಕೊಡೊ ಪ್ರಸಂಗ ” ಎಂದು ನುಡಿದು, ಹಿಂದೆ ಆಗಿಹೋದ ಅಂಥ ಒಂದು ಭೀಕರ ಪ್ರಸಂಗವನ್ನು ವರ್ಣಿಸಿದಳು.

ಅಂದಿನ ರಾತ್ರಿ ಹೇಗೋ ಸರಿಯುತ್ತಲಿತ್ತು. ಊರ ಪಂಚರು ಮಾತ್ರ ಗಂಗೆ ಅಳಿಯುವ ವ್ಯವಸ್ಥೆ ಮಾಡುತ್ತಲಿದ್ದರು. ಗಂಗೆ ಅಳಿಯುವದಕ್ಕೆ ಹೊಸ ಮರಗಳು ಬೇಕು ಅಳಿಯುವವಳಿಗೆ ಉಡಿತುಂಬಿಸಬೇಕು. ಹೊಸ ಸೀರೆ ಮೋದ ಲಾದವುಗಳನ್ನು ಕೊಡಬೇಕು. ಊರತುಂಬ ಅವಳ ಮೆರವಣಿಗೆಯಾಗಿ ಅವಳು ಹೊಳೆಯುದಡಕ್ಕೆ ಬಂದು ಗಂಗೆ ಅಳಿಯುಬೇಕು—ಇದು ನಿಯಮ. ರಾಮಣ್ಣ ಎಲ್ಲ ಸಿದ್ಧತೆ ಮಾಡಿ ಚಾವಡಿಯ ಕಂಬಕ್ಕೆ ಆತು ಕುಳಿತುಕೊಂಡ. ಅವನ ಮುಖದಲ್ಲಿ ಇನ್ನೂ ಒಂದು ಸಂಶಯ ಕಾಣಿಸಿಕೊಳ್ಳುತ್ತಿತ್ತು. ಹೊಲೆಯರ ಗಂಗವ್ವನ ಗಂಡ ಹಾಗೂ ಮಕ್ಕಳು ಇದಕ್ಕೆ ಒಪ್ಪಿ ಅವಳನ್ನು ಈ ಕೆಲಸಕ್ಕೆ ಬಿಡಬಹುದೆ ? ಎಂದು.

ಬೆಳಗು ಮೂಡಿದೆ ! ಜನ ಕಿಕ್ಕಿರಿದು ಚಾವಡಿಯ ಮುದೆ ನೆರೆ ದಿದ್ದಾರೆ. ಅನೇಕ ವಾದ್ಯಗಳು ಮೊಳಗುತ್ತಿದ್ದವು. ಕೆಲವರ ಹೃದಯಕ್ಕೆ ಸಾವಿನ ಸುದ್ದಿ ಮುಟ್ಟಿದಂತೆ ಭಾಸವಾಗುತ್ತಿದೆ. ಎಲ್ಲರೂ ಭೀತರಾಗಿ ದ್ದಾರೆ ! ಗರತಿ ಗಂಗಮ್ಮ ತನ್ನ ಮುರುಕು ಗುಡಿಸಲಿನಿಂದ ಹೊರಹೊರಟಳು. ದೊಡ್ಡ ಕುಂಕುಮ ಹಣೆಯಲ್ಲಿ ಹೊಳೆಯುತ್ತಿದೆ. ಹೊಸ ಸೀರೆ ಉಟ್ಟು ಚಾವಡಿಯಕಡೆಗೆ ನಡೆದಳು. ಜನ ಅವಳನ್ನು ಹಿಂಬಾಲಿಸಿತು ! ಅವಳ ಗಂಡ ಕರಿಯ ತನ್ನ ತೋಳಮೇಲೆ ಚಿಕ್ಕ ಮಗುವನ್ನು ಎತ್ತಿಕೊಂಡಿದ್ದಾನೆ. ಇನ್ನೊಂದು ಐದಾರು ವರುಷದ ಮಗು ಅಳುತ್ತ ಅವನ ಹಿಂದೆ ಬರುತ್ತಿದೆ. ಎಂಥ ಹೃದಯ ವಿದಾರಕ ದೃಶ್ಯ ! ಕರಿಯನ ಮುಖದ ಮೇಲೆ ಅಳುವು ಹಣಕಿ ಹಾಕುತ್ತಲಿದೆ. ಆದರೆ ಅವನು ಹಾಗೆ ಮಾಡಲಾರ. ಬಹುಜನರಿಗೆ ಸುಖವಾಗುವ ಕಾರ್ಯ ತನ್ನ ಕೈಹಿಡಿದವಳು ಮಾಡುತ್ತಿರುವಾಗ—ತಾನೇಕೆ ಅವಳನ್ನು ತಡೆಯುಬೇಕು ? ಚಾವಡಿಯ ಮುಂದೆ ನಿಂತು ಗಂಗಮ್ಮ ಊರ ಗೌಡರಿಗೆ—ಪಂಚರಿಗೆ ನಮಸ್ಕಾರ ಮಾಡಿದಳು ! ರಾಮಣ್ಣ ತುಸು ಮುಂದೆ ಬಂದು ಕರಿಯನನ್ನು ಕೇಳಿದ. “ ಕರಿಯಾ ನಿನ್ನ ಮನಸ್ಸಿನ ವಿರುದ್ಧ ನಾವಿಲ್ಲ! ನಿಜ ಹೇಳು, ನಿನ್ನ ಹೆಂಡತಿ ಗಂಗಿ ಅಳಿಯೋದಕ್ಕೆ ಸಮ್ಮತಿ ಕೊಡುವಿಯಾ ?”

ಅದಕ್ಕೆ ಕರಿಯಾ " ದ್ಯಾವ್ರು ಆಕಿ ಸಾಯೋದಿಲ್ಲ. ನಾ ಕರೇ ಹೇಳ ತೀನ್ರಿ–ನೀರು ಹಿಂದ ಸರಿತ್ತೈತಿ " ಎಂದ.

" ಒಂದು ಪಕ್ಷಕ್ಕೆ ಅವಳನ್ನು ಹೊಳೆ ಎಳೆದುಕೊಂಡರೆ ?"

" ಎಪ್ಪಾ, ದ್ಯಾವ್ರು ಹಾಗ ಮಾಡ್ಯಾನ ? ನನ್ನ ಗಂಗಿ ಗರತಿ ಅದಾಳು " ಎಂದು ನುಡಿದು ಮದಲಗಟ್ಟೆಯ ಕಡೆಗೆ ನಮಸ್ಕಾರ ಮಾಡಿದ !

ವಾದ್ಯಗಳ ಮೇಳದೊಂದಿಗೆ ಗಂಗಮ್ಮ ತಲೆಯ ಮೇಲೆ ತುಂಬಿದ ಬಿಂದಿಗೆ ಹೊತ್ತು ಹೊರಟಳು. ಜನವೂ ಹೊರಟಿತು. ನದಿಯ ದಡಕ್ಕೆ ಬಂದು ಎಲ್ಲರೂ ನೆಟ್ಟ ನೋಟದಿಂದ ಅವಳ ಕಡೆಗೇ ನೋಡುತ್ತಲಿದ್ದರು. ನೀರು ಬಹಳ ಏರಿದೆ ಗಂಗಮ್ಮ ಧೈರ್ಯವಾಗಿ ಹೊಳೆಗೆ ಪೂಜೆಮಾಡಿ ಕೈ ಜೋಡಿಸಿ "ತಂಗಮ್ಮ–ನಾ ಗರತಿ ಕರೆ ಆದರ ನನ್ನ ಮಾನಾ ಉಳಿಸಿ ಹಿಂದ ಸರಿ ತಾಯಿ"– ಎಂದು ಮರ ತೆಗೆದುಕೊಂಡು ನದಿಯಲ್ಲಿ ನೀರು ಉಗ್ಗಿದಳು. ಏನು ಆಶ್ಚರ್ಯ! ನೀರು ಕೂಡಲೆ ಬಂದು ಪಾವಟಿಗೆ ಹಿಂದೆ ಸರಿಯಿತು ! ಮತ್ತೆ ಮತ್ತೆ ಗಂಗಮ್ಮ ಮರ ತುಂಬಿ ಮೂರು ಸಲ ನೀರು ತುಂಬಿ ಉಗ್ಗಿದಳು. ಹೊಳೆಯು ಒಮ್ಮೆಲೆ ಇಳಿದುಹೋಯಿತು ! ಜನರೆಲ್ಲ ಚಪ್ಪಾಳೆ ತಟ್ಟಿ ಗಂಗಮ್ಮನನ್ನು ಬಹುವಾಗಿ ಕೊಂಡಾಡುತ್ತಿರುವಾಗ, ಗಂಗಮ್ಮ ಯಾರಿಗೂ ಅರಿಯದಂತೆ ತನ್ನ ಗುಡಿಸಲು ಸೇರಿದ್ದಳು !

* * * *

ಈಗಲೂ ನದಿಯ ದಡದಲ್ಲಿ ಗಂಗಮ್ಮನಿಗಾಗಿ ಅಂದು ಊರ ಜನ ಮೆಚ್ಚಿ ಕೊಟ್ಟ ಹೊಲವಿದೆ ! ಆ ಹೊಲದ ಮಧ್ಯದಲ್ಲಿ ಒಂದು ಭವ್ಯವಾದ ಆಲದ ಮರವಿದೆ. ಗಿಡದಡಿಯಲ್ಲಿಯೇ ಗಂಗಮ್ಮನ ನೆನಪಿಗಾಗಿ ಒಂದು ಕಲ್ಲನ್ನಿಟ್ಟಿ ದ್ದಾರೆ. ಹುಣ್ಣಿಮೆ ಅಮಾವಾಸ್ಯೆಗಳಲ್ಲಿ ಗಂಗಮ್ಮನಿಗೆ ಪೂಜೆ ಸಲ್ಲುತ್ತಿದೆ. ತ್ಯಾಗಿಗಳು ಸತ್ತರೆಂಬ ಮಾತು ಸುಳ್ಳುಮಾಡಲು ಗಂಗಮ್ಮ ಆ ಊರ ಜನರ ಹೃದಯದಲ್ಲಿ ಇಂದಿಗೂ ವಾಸವಾಗಿದ್ದಾಳೆ !

---

# ಮೋಟರ ಮಹಮ್ಮದ

●

ನಮ್ಮಂತಹ ಈಗಿನ ಜನಗಳಿಗೆ ಹೊಲ, ಮನೆ, ಪೂರ್ವಾರ್ಜಿತ ಆಸ್ತಿ ಪಾಸ್ತಿಗಳಲ್ಲಿ ಹೆಚ್ಚು ಆದರವಿಲ್ಲೆಂದು ನಮ್ಮ ಹಿರಿಯರು ಮೇಲಿಂದ ಮೇಲೆ ಏನನ್ನೋ ಒಟಗುಟ್ಟುತ್ತಿರುತ್ತಾರೆ. ನಾವಾದರೋ ಹಳ್ಳಿಯನ್ನು ಕಾಣದೆ ಎಷ್ಟೋ ವರುಷಗಳಾದವು. ಹಳ್ಳಿಯ ಜೀವನ ನಮಗೆ ಈಗ ಒಗ್ಗಬೇಕಾದರೂ ಹೇಗೆ ? ಶಹರದ ಬೆಡಗಿನ ಜೀವನದ ಮುಂದೆ ಹಳ್ಳಿಯ ಸರಳ ಜೀವನ ಸೊಗಸೆನಿಸುವದಾದರೂ ಸಾಧ್ಯವಿದೆಯೆ ? ಈ ಸಿನೆಮಾ ಮಂದಿರಗಳು. ವಿವಿಧ ವಿವಿಧ ತಿಂಡಿತಿನಿಸುಗಳನ್ನು ಒದಗಿಸಿಕೊಡುವ ಹೋಟಲುಗಳು, ಹೊಸ ಬಗೆಯ ಆಟಪಾಟಗಳು—ನಮಗೆ ಆ ಹಾಳು ಹಳ್ಳಿಗಳಲ್ಲಿ ಸಿಕ್ಕುವದಾದರೂ ಹೇಗೆ ? ಇರಲಿ. ಅಂದು ನಾನು ಹಿರಿಯರ ಹಟದ ಮಾತುಗಳನ್ನಾದರೂ ನಡಿಸಿ ನಮ್ಮ ಜಮೀನಿನ ಲಾವಣೀ ಹಣ ತರುವದಕ್ಕಾಗಿ ನಮ್ಮ ಹಳ್ಳಿಗೆ ಹೊರಡುವದನ್ನು ನಿಶ್ಚಯಿಸಿದೆ. ಈಗಿನ ಹೊಸ ಕಾಯಿದೆಗಳ ಜ್ಞಾನವಿಲ್ಲದ ಹಿಂದಿನ ಹಿರಿಯರಿಗೆ ಎಷ್ಟೋ ತೊಂದರೆಗಳು ಬಂದು ಮುತ್ತುವದರಲ್ಲಿ ಸಂದೇಹವಿಲ್ಲ. ಟೆನೆನ್ಸಿ ಕಾಯಿದೆ ಅನ್ವಯದ ಮೇರೆಗೆ ನಮ್ಮ ರೈತ ನಮಗೆ ದುಡ್ಡುಕೊಡುವದನ್ನು ಬಿಟ್ಟು ನಿಷ್ಠುರವಾಗಿ ದುಡ್ಡು ಮುಳಗಿಸುವ ದಕ್ಕೆ ಹಟತೊಟ್ಟಿದ್ದ. ಇಂಥ ಪ್ರಸಂಗದಲ್ಲಿ ನಾನಾದರೂ ಮಾಡುವದೇನು ? ಏನೋ ಮೇರೆ ಬದಲಾಗಿ ನಾಲ್ಕು ಸವಿಮಾತಿಗಾದರೂ ಅವನು ಮಣಿಯ ಬಹುದೆಂದು ಯೋಜನೆ ಮಾಡಿ ಅಂದು ನಮ್ಮೂರ ಮೋಟಾರ ಹತ್ತಿದೆ.

ನಾನು ಹಳ್ಳಿಯನ್ನು ಬಿಟ್ಟು ಹತ್ತು ವರುಷಗಳಾಗಿ ಹೋಗಿದ್ದವು ! ಮಹಾತ್ಮಾಗಾಂಧಿಯವರು ಹಳ್ಳಿಗಳ ಉದ್ಧಾರದ ಬಗ್ಗೆ ಬರೆದ ಅನೇಕ ಲೇಖನ ಗಳನ್ನು ಹರಿಜನದಲ್ಲಿ ಓದಿ, ಪಟ್ಟಣದಲ್ಲಿಯೇ ಕುಳಿತು, ಹರಟೆ ಹೊಡೆಯು ವವರಲ್ಲಿ ನಾನೊಬ್ಬ. ಈ ಹತ್ತು ವರ್ಷಗಳ ಅವಧಿಯಲ್ಲಿ ಎಂದಾದರೂ ಹಳ್ಳಿಗೆ ಹೋದಲ್ಲಿ, ಯಾರ ಸಂಬಂಧವಿಲ್ಲದೆ ನಮ್ಮ ಮನೆಯಲ್ಲಿಯೇ ಇದ್ದು ತಿರುಗಿ ಬಂದು ಬಿಡುತ್ತಿದ್ದೆ. ಈಗಂತೂ ನಮ್ಮ ಮನೆಯವರೆಲ್ಲ ಪಟ್ಟಣಕ್ಕೇಬಂದಿದ್ದಾರೆ.

ಕಾಲದಲ್ಲಿ ಬದಲಾವಣೆಯಾದಂತೆ ಹಳ್ಳಿಯಲ್ಲಿಯೂ ಒಂದು ಬಗೆಯ ಬದಲಾವಣೆಯು ಸಾಗಿಯೇ ಸಾಗಿರುತ್ತದೆ. ಆದರೆ ನಮಗೂ ಹಳ್ಳಿಗೂ ಸಂಬಂಧವಿಲ್ಲದಿರುವದರಿಂದ ನಾವು ಯೋಚನೆ ಮಾಡದೆ ನಮ್ಮ ಸುತ್ತು ಮುತ್ತು ಮಾತ್ರ ನೋಡುವ ಅಭ್ಯಾಸವಿಟ್ಟುಕೊಂಡಿರುತ್ತೇವೆ. ಅಂದು ಮೋಟಾರು ತುಸು ಹೊತ್ತಾಗಿಯೇ ಹಳ್ಳಿಯನ್ನು ತಲುಪಿತು. ಅದು ಮುಚ್ಚಂಜೆಯ ಸಮಯ. ದನಕರಗಳ ಕಾಲಿನ ಧೂಳಿ ಮುಗಿಲ ಮುಟ್ಟಿತ್ತು. ದನಗಳ ಕೊರಳೊಳಗಿನ ಗಂಟೆಗಳ ನಾದ ವಾತಾವರಣದಲ್ಲಿ ಬೆರೆತು ಒಂದು ಬಗೆಯ ಆನಂದವನ್ನುಂಟು ಮಾಡುತ್ತಿತ್ತು. “ ಬಾರೋ ಬಸವಣ್ಣ ಬಾ ” ಎಂಬ ದನಗಾಯಿಗಳ ಜಾನಪದದ ಸಂಗೀತ ಅಲ್ಲಿ ಇಲ್ಲಿ ಕೇಳಿಬರುತ್ತಿತ್ತು. ಸಹಜ ಸೌಂದರ್ಯವು ಹಳ್ಳಿಯನ್ನು ಸುತ್ತಿಗೊಂಡಿತ್ತು. ನನಗೂ ಒಂದು ಬಗೆಯ ಆನಂದವಾಯಿತು.

ನಾನು ಸಣ್ಣವನಿರುವಾಗ ಈಗ ಮೋಟರು ನಿಂತುಕೊಳ್ಳುವ ಸ್ಥಳದಲ್ಲಿ ಏನೂ ಇರಲಿಲ್ಲ! ಈಗ ಮಾತ್ರ ಒಂದು ಚಹದಅಂಗಡಿ, ನಾಲ್ಕಾರು ಬೀಡಿ ಅಂಗಡಿಗಳು ಶೋಭಿಸುತ್ತವೆ. ಅಲ್ಲಿಯೇ ಜನರು ಕಿಕ್ಕಿರಿದು ತುಂಬಿರುತ್ತಾರೆ. ನಾನು ಮೋಟಾರಿನಿಂದ ಕೆಳಗಿಳಿದು ಕತ್ತಲಲ್ಲಿ ಹೇಗೆ ಊರಲ್ಲಿ ಹೋಗುವದೆಂದು ಯೋಚಿಸಹತ್ತಿದೆ. ಹತ್ತರವೇ ಇರುವ ಗುಡಿಸಲೊಂದರಲ್ಲಿ ಪೆಟ್ರೋಮ್ಯಾಕ್ಸ-ಬೆಳಕು ಹೊರಸೂಸಿ ಬರುತ್ತಿತ್ತು. ತುಸು ಮುಂದಕ್ಕೆ ಬಂದು ನೋಡಿದೆ. “ ಚಹಾ ಕಾಫಿ ಫರಾಳದ ಅಂಗಡಿ ” ಶುದ್ಧ ಕನ್ನಡ ಅಸ್ತವ್ಯಸ್ತ ಅಕ್ಷರಗಳ ಬೋರ್ಡು! ‘ ಸಂತೋಷ ’ ಎಂದು ಒಳಹೊಕ್ಕೆ. ಎದುರಿಗೆ ಒಂದು ಸದ್ದಾಮುದ್ದಾ ಕಪಾಟು ಇಟ್ಟದೆ. ಅದರ ಮೇಲೆ ಲಕ್ಷ್ಮೀ ಸರಸ್ವತಿಯ ಚಿತ್ರಗಳು ಕಂಗೊಳಿಸುತ್ತಿವೆ! ರೂಢಿಯಲ್ಲಿ ಫರಾಳವೆಂದು ಹೇಳಿಕೊಳ್ಳುವ ವಸ್ತುಗಳೇನು ಕಾಣದಿದ್ದರೂ ಕಪಾಟಿನಲ್ಲಿ ತಿನ್ನುವ ಪದಾರ್ಥಗಳು ಕಣ್ಣಿಗೆ ಕಾಣಿಸುತ್ತಿದ್ದವು. ನಾಲ್ಕಾರು ಉದ್ದನ್ನ ಕಟ್ಟಿಗೆಯ ಫಳಿಗಳನ್ನು ಅಂತರವಾಗಿಟ್ಟು ಜನರಿಗೆ ಕೂಡುವದಕ್ಕೆ ಅವಕಾಶ ಮಾಡಿಕೊಟ್ಟಿದ್ದಾರೆ. ಅವುಗಳಿಗೆ ಬೇಕಾದರೆ ನಾವು “ ಬೆಂಚು ” ಎಂದೆನ್ನಬಹುದು! ನಾನು ಒಳಹೊಕ್ಕು ಸುತ್ತುಮುತ್ತು ನೋಡಿ ಹಾಗೆಯೇ ನಿಂತುಕೊಂಡೆ. ನನಗೆ ಮಾತ್ರ ಅಲ್ಲಿ ಯಾರ ಗುರುತು ಸಿಕ್ಕಲಿಲ್ಲ. ಆದರೆ ಅಲ್ಲಿಯೇ ಬೆಂಚಿನ ಮೇಲೆ ಕುಳಿತಿರುವ ಒಬ್ಬ ವ್ಯಕ್ತಿ “ ಯಾಕರೀ........ರಾಯರ

ಯಾವಾಗ ಬಂದ್ರೀ ?" ಎಂದ. ನಾನು " ಈಗ ಮೋಟಾರಿಗೆ ಬಂದೆ." ಎಂದು ನುಡಿದು ಅಲ್ಲಿಯೇ ಕುಳಿತುಕೊಂಡೆ. ನನ್ನನ್ನು ಮಾತನಾಡಿಸಿದ ವ್ಯಕ್ತಿಯ ಕಡೆಗೆ ದೃಷ್ಟಿ ತಿರುವಿದೆ. ಆದರೂ ಗುರುತು ಸಿಕ್ಕಲಿಲ್ಲ. ವ್ಯಕ್ತಿ ಯಾದರೋ ಮುಹಮ್ಮದೀಯನೆಂಬದು ಸ್ಪಷ್ಟ ! ತಲೆಯ ಮೇಲೆ ಉದ್ದನ್ ಫರ್‌ಕ್ಯಾಪು, ಮೈಯಲ್ಲಿ ಖಾಕಿ ಕೋಟು, ಕಾಲಲ್ಲಿ ಮಿರಿ ಮಿರಿ ಮಿಂಚುವ ಸ್ಲಿಪರ್ಸ್-ಆ ವ್ಯಕ್ತಿಗೆ ಒಂದು ಅಪೂರ್ವ ಕಳೆತಂದು ಕೊಟ್ಟವೆ. ನಿರಾಯಾಸ ವಾಗಿ ಸಿಗಾರೇಟ್ ಹೊಗೆ ಬಿಡುವ ಆ ವ್ಯಕ್ತಿ ಯಾರಿರಬಹುದು ? ತುಸು ತಲೆ ತುರಸಿಕೊಂಡು " ನೀನು....ನಮ್ಮ ಎಂದು ಪ್ರಾರಂಭಿಸಿದೆ." ಅದಕ್ಕೆ ಅವನು "ನಾನು ಮೋಟಾರ ಮುಹಮ್ಮದ ಸಾಬರೀ....ನಾವೂ ನೀವೂಕೂಡೇ ಸಾಲಿ ಕಲ ತೇವಿ, ಗುರುತ ಸಿಗವಲ್ಲತ್ರೀ " ಎಂದ. "ಓಹೋ....ನೀನ....ಮುಮ್ಮದಸಾಬ ಈಗ ಏನ ಮಾಡತೀಪಾ ?" ಎಂದು ಕೇಳಿದೆ.

" ರಾಮಣ್ಣಾರ ನಮ್ಮ ಧಂದೆವು ಏನ್ರೀ....ಹೀಗ " ಎಂದ. ನಾನು ಮಾತನಾಡದೆ ಅವನನ್ನು ಹುಳು ಹುಳು ನೋಡಿದೆ. ಸುತ್ತುಮುತ್ತಲಿನ ಒಕ್ಕಲಿಗರೂ ನನ್ನಕಡೆಗೆ ನೋಡಿದರು. ಮತ್ತೆ ಮುಹಮ್ಮದಸಾಬನೇ ನುಡಿದ " ಮೋಟ್‌ರ ಧಂದೇವ್ರಿ ನಮ್ಮದು. ಏನು ನಿಮ್ಮಾಂಗ ಕಲತೇವ್ರೀ ನಾವು ? "

" ನೀ ಈಗ ಡ್ರಾಯಿವ್ಹರ ಆಗೀ ಏನು ? "

" ಡ್ರಾಯಿವ್ಹರನೂ ಆಗಿದ್ದೆ. ಈಗ ಮಾಲಕನೂ ಆಗೇನಿ " ಎಂದು ಒಮ್ಮೆ ನಕ್ಕು ಮತ್ತೆ ಸಿಗರೇಟು ಜಗ್ಗಿದ !

"ಅಲ್ಲಪಾ ಮುಹಮ್ಮದಸಾಬಾ, ಎಷ್ಟ ಮೋಟಾರ ಅದಾವು ನಿನ್ನವು ? " ಎಂದು ಮತ್ತೆ ಮಾತಿಗೆ ಮೊದಲು ಮಾಡಿದೆ.

" ನನ್ನವು ಈಗ ನಾಲ್ಕು ಮೋಟರ ಅದಾವ್ರಿ. ಇದ....ವರುಷ ಒಂದು ಹಿಟ್ಟಿನ ಗಿರಣೀನು ಚಾಲು ಮಾಡೇನಿ " ಎಂದ.

ಇಷ್ಟರಲ್ಲಿಯೇ ಹೊರಗೆ ಮತ್ತೆ ಮೋಟಾರ "ಫೌಂ....ಫೌಂ" ಸಪ್ಪಳ! ಮುಹಮ್ಮದನು ಎದ್ದು " ಕುಂತಗೋರಿ ರಾಮಣ್ಣಾರ. ರಾಮದುರ್ಗದ ಮೋಟರ ಬಂತು ನಾ ಈಗ ಬರತೇನಿ " ಅಂದು ಹೊರಗೆ ಹೋದ. ನನಗೆ

ಮಹಮ್ಮದಸಾಬನ ಮಾತುಕೇಳಿ ಬಹಳ ಅಚ್ಚರಿಯನಿಸಿತು. ನಾನು ಮುಂಬಯಿ ವಿಶ್ವವಿದ್ಯಾಲಯದ ಪದವೀಧರನಾಗಿ, ಕಣ್ಣು ಕೆಡುವಂತೆ ಓದಿ ಪಡೆದದ್ದಾದರೂ ಏನು ? ಸ್ವಾತಂತ್ರ್ಯವಂತೂ ನನಗಿಲ್ಲ. ಆದರೆ ಮಹಮ್ಮದ ಸಾಬ ಈಗ ನಾಲ್ಕು ಮೋಟರಿನ ಮಾಲಕ. ಸ್ವತಂತ್ರ ಜೀವಿ. ಎಂಥ ಬದಲಾವಣೆ ! ಹೀಗೆ ಏನನ್ನೋ ಯೋಚಿಸುತ್ತ ಎದುರಿನಲ್ಲಿ ನೋಡಿದೆ. ಚಹದಂಗಡಿಯ ಗೋಡೆಗೆ ಕೈಲಾಸನಾಥನ ಚಿತ್ರ ತೂಗು ಬಿದ್ದಿದೆ ! ಕೈಲಾಸ ಪರ್ವತದಲ್ಲಿ, ಪಾರ್ವತಿಯನ್ನು ವಾಮಾಂಕದೊಳಿರಿಸಿ, ಯಾವ ತೊಂದರೆ ಇಲ್ಲದೆ ನಿರಾಯಾಸವಾಗಿ ತನ್ನ ಎಲ್ಲ ಆಯುಧಗಳನ್ನು ಯಾವಾಗಲೂ ಹಿಡಿದುಕೊಂಡು ಕುಳಿತ ಶ್ರೀ ಶಂಕರನು-ಇಲ್ಲಿ ಈ ಚಹದ ಅಂಗಡಿಯಲ್ಲಿ ಹೊಗೆ ಕುಡಿದು ಬೇಸತ್ತಿರಬಹುದೇ ? ಎಂದು ಏನೋ ವಿಚಾರಿಸುತ್ತಿರುವಾಗಲೆ "ರಾಯರ, ಚಹಾ ಕಾಸೇನಿ ಸಿಂಗಲ್ಲ ಕೊಡಲೋ ಡಬ್ಬಲ್ ಬೇಕೋ" ಎಂಬ ಧ್ವನಿ ! ಅಂಗಡಿಯ ಮಾಲಕ ನನ್ನೆದುರು ನಿಂತಿದ್ದ. ತನ್ನ ಕರವಸೂಲಿ ಬಿಟ್ಟಾನೆ ? "ಸಿಂಗಲ್ ಸಾಕು. ಸ್ವಚ್ಛ ಕಪ್ಪು ಬಸಿ ತೊಳೆದು ಕೊಡು" ಎಂದೆ. ಅದಕ್ಕೆ ಅವಾ "ನಮ್ಮೂರ ಚಹಾನರs ಕುಡದು ನೋಡ್ರಿ ಮುಂಬಯಿಯಾಗ ಸಿಗಾಕಿಲ್ಲ ಇಂಥಾದು" ಎಂದ. ನಾನು ಮನದಲ್ಲಿಯೇ ಮುಂಬಯಿಯಾಗ ಇಂಥಾ ಚಹಾ ಸಿಕ್ಕೀತಾದರೂ ಹೇಗೆ–ಎಂದು ಯೋಚಿಸಿದೆ. ಅವನು ಕೊಟ್ಟ ಚಹ ಹಾಗೂ ಹೀಗೂ ಮಾಡಿ ಕುಡಿದೆ. ನನ್ನ ಚಹಾಪಾರ್ಟಿ ಮುಗಿಯುವದರಲ್ಲಿಯೇ ಮಹಮ್ಮದಸಾಬ ಬಂದು "ಊರಾಗ ಹೋಗೋಣ ಬರ್ರೀ.... ರಾಮಣ್ಣ" ಅಂದ.

ಪೆಟ್ರೋಮ್ಯಾಕ್ಸ ಹೊತ್ತುಕೊಂಡು ಒಂದು ಹುಡುಗ ಮುಂದೆ ಮುಂದೆ ನಡೆದ, ನಾನು ಮಹಮ್ಮದಸಾಬನ ವೈಭವಕ್ಕೆ ಬೆರಗಾದೆ ! ನಾನು ಹಾಗೂ ಮಹಮ್ಮದಸಾಬ ಇನ್ನೂ ಕೆಲವರು ಊರಲ್ಲಿ ಹೊರಟೆವು. ನಾನು ಹೋಗಬೇಕಾದ ಮನೆ ಸಮೀಪಿಸಲು ಮಹಮ್ಮದ "ನಾಳೆ ಭೆಟ್ಟಿ ಆಕ್ತೇನಿ ರಾಯರ ಈ ಊರಾಗ ನಾಕ ದಿವಸ ಇದ್ದ ಹೋಗ್ರಿ. ನಮಸ್ಕಾರ" ಎಂದ.

"ನನ್ನ ಹೊಲದ ಲಾವಣಿ ಕೆಲಸ ಮುಗಿತಂದ್ರ ಹೋಗತೇನಿ" ಎಂದು ನಾನು ಮಾರುನುಡಿದೆ.

"ಯಾರ ಮಾಡ್ಯಾರ್ರೀ ನಿಮ್ಮ ಹೊಲ ?"

"ಹಿತಲ್ತ ಮನಿ ತಿಪ್ಪ ಮಾಡ್ಯಾನ" ಎಂದು ನುಡಿದು ಮನೆಯ ಕಡೆಗೆ ಹೊರಟ "ನಾಳೆ ಎಲ್ಲಾ ವಿಚಾರ ಮಾಡೋಣ್ರಿ" ಎಂದು ಮಹಮ್ಮದ ಮುಂದೆ ಸಾಗಿದ.

ನಾನು ಮನೆ ಸೇರಿದಾಗ ಸಾಕಷ್ಟು ರಾತ್ರಿಯಾಗಿತ್ತು. ಮನೆಯವ ರೆಲ್ಲ ನನ್ನನ್ನು ಆದರದಿಂದ ಬರಮಾಡಿಕೊಂಡರು. ಊಟವೂ ಮುಗಿಯಿತು. ಅಂದಿನ ರಾತ್ರಿ ಊಟ ಮುಗಿದಮೇಲೆ ಮಾತಿಗೆ ಮಾತು ಹೊರಟು ಅದು ಮಹಮ್ಮದಸಾಬನ ಉದ್ಯೋಗದ ಕಡೆಗೆ ಹೊರಳಿತು. ನಾನು ಅತಿಥಿಯಾದ ಮನೆಯ ಯಜಮಾನರನ್ನು ಕುತೂಹಲದಿಂದ ಕೇಳಿದೆ. "ಮಹಮ್ಮದ ಸಾಬನ ತಾಯಿ ಇನ್ನೂ ಇದ್ದಾಳೇನು ?"

"ಛೇ....ಪಾಪ! ಅವಳು ಸತ್ತು ಏಳು ವರ್ಷಾಯಿತು" ಎಂದು ನುಡಿದು ತಮ್ಮ ಎಲಿ ಅಡಕೆ ಚಂಚಿ ತರಲು ಒಳಗೆ ಹೋದರು. ನಾನು ಆಕಾಶದ ಕಡೆಗೆ ನೋಡುತ್ತ ಕಟ್ಟೆಯಮೇಲೆ ಕುಳಿತುಕೊಂಡೆ. ಶರತ್ಕಾಲದ ಆಕಾಶ ಚುಕ್ಕೆಗಳಿಂದ ಶೋಭಿಸುತ್ತಿತ್ತು. ಬೆಳದಿಂಗಳು ಎಲ್ಲೆಲ್ಲಿಯೂ ಹರ ಡಿತ್ತು. ಮಂದವಾಗಿ ಗಾಳಿ ಬೀಸುತ್ತಿತ್ತು. ಹಳ್ಳಿಯ ಹುಡುಗರು ಕೇಕೆ ಹಾಕುತ್ತ ಅಂಗಣದಲ್ಲಿ ತಿಳ್ಳೀ ಆಟವಾಡುತ್ತಿದ್ದರು. ಹೆಣ್ಣುಮಕ್ಕಳು ಹಾಡುತ್ತ ಕಟ್ಟೆಗಳ ಮೇಲೆ ಕುಳಿತಿದ್ದರು. ಎಲ್ಲವೂ ಸಮಾಧಾನ; ಸುಖ! ನನ್ನ ಮನಸ್ಸು ಹತ್ತು ವರುಷಗಳ ಹಿಂದೆ ಹಾರಿ ಹೋಯಿತು. ಮಹಮ್ಮದನ ಸಂಗಡ ನಾನೂ ಅಂಗಣದಲ್ಲಿ ತಿಳ್ಳೀ ಆಟವಾಡಿದ ಸವಿನೆನಪು ಒಂದು ಕ್ಷಣ ಕಾಲ ಹರ್ಷವನ್ನೀಯಿತು! ನಾನೂ ಈಗ ಈ ಮಕ್ಕಳ ಹಾಗೆ ಆಡಲಾರೆನೆಂಬ ನೋವು ಮನದಲ್ಲಿ ಮೂಡಿತು. ಕಾಲಧುರಿಯು ನನ್ನನ್ನು ಬಹುದೂರ ಬಾಲ್ಯದಿಂದ ಸಾಗಿಸಿಕೊಂಡು ಹೋಗಿದೆಯೆಂಬ ಅರಿವು ಆಗ ನನಗೆ ಉಂಟಾ ಯಿತು. ಮಹಮ್ಮದನು ಮೊದಲಿನಿಂದಲೂ ಆಟಗಾರ ಆದರೆ ತುಂಟ. ಅವನು ಯಾವಾಗಲು ಓಣಿಯ ಹುಡುಗರ ನಾಯಕನೇ ಆಗಿರುತ್ತಿದ್ದ. ತಂದೆ ತೀರಿಕೊಡಂದಿನಿಂದ, ಅವನಿಗೇನು ಅವನ ತಾಯಿ ಚಾಂದಬಿ ಕೊರತೆ ಮಾಡಿರಲಿಲ್ಲ. ತಾನು ಕೂಲಿಮಾಡಿಯಾದರೂ ಮಹಮ್ಮದನನ್ನು ಸುಖವಾಗಿಟ್ಟಿದ್ದಳು. ತಮ್ಮದೇ ಆದ ಚಿಕ್ಕಮನೆಯಲ್ಲಿ ತಾಯಿ ಮಗ ಸುಖ ವಾಗಿದ್ದರು. ಮಹಮ್ಮದ ನನ್ನ ಜೊತೆಗೆ ಸಾಲಿಗೆ ಬರುತ್ತಿದ್ದ. ನನ್ನ ಸಹಪಾಠಿ

ಎಂದು ನನಗೆ ಈಗಲೂ ಅವನ ಬಗ್ಗೆ ಹೆಮ್ಮೆ ಅನಿಸುತ್ತದೆ. ಹುಡುಗ ಸಾಲೆಯಲ್ಲಿ ಉಡಾಳನೆಂಬ ಬಿರದು ಪಡೆದುಕೊಂಡನೇ ಹೊರತು-ಶಿಕ್ಷಣ ವನ್ನಲ್ಲ! ಅಂಕಿ ಮಗ್ಗಿಗಳನ್ನೂ ಗಟ್ಟಿಮಾಡಿಕೊಂಡು ಬಾರದ್ದಕ್ಕೆ ಮೊಣಕೈ ಮುರಿಯುವಂತೆ ಹೊಡೆಯಿಸಿಕೊಳ್ಳುತ್ತಿದ್ದ. ಸಾಲೆಯಲ್ಲಿಯ ಜಾಣ ವಿದ್ಯಾರ್ಥಿಗಳ ಜೊತೆಗೆ ನ್ಯಾಯತೆಗೆದು ಅವರನ್ನು ಗುದ್ದಿ ಅಳಿಸುತ್ತಿದ್ದ. ಮಹಮ್ಮದನ ಹಾವಳಿ ಹೀಗೆ ಸಾಗಿಯೇ ಇರುತ್ತಿತ್ತು. ಕೊನೆಗೆ ನಾಲ್ಕನೇ ಈಯತ್ತೆಗೆ ಬಂದು ಮುಟ್ಟಿದ. ಶಾಲೆಯ ಜೀವನ ಅವನಿಗೆ ಒಗ್ಗಲಿಲ್ಲೇನೋ? ಶಾಲೆಬಿಟ್ಟ!

ಹುಡುಗ ನೋಡುವದಕ್ಕೆ ಸುಂದರ. ನೀಟಾದ ಮೂಗು. ದುಂಡನ್ನ ಮೋರೆ. ಬಣ್ಣವು ನಸುಗೆಂಪು. ಈಗ ಚನ್ನಾಗಿ ಕ್ರಾಪ್‌ಬಿಟ್ಟು, ಹಿಕ್ಕಿಕೊಂಡು ಓಣಿ ಓಣಿ "ತನನ....ನನನ" ಹಾಡುತ್ತ ತಿರುಗುವದಕ್ಕೇ ಸುರುವು ಮಾಡಿದ ಮಹಮ್ಮದನು ಸಾಲೆಗೆ ಬರುವದನ್ನು ಬಿಟ್ಟಬಳಿಕ ನಾವೆಲ್ಲರೂ ಅವನನ್ನು ನೋಡಿ ನಗುತ್ತಿದ್ದೆವು! ಅವನ ಸಂಗಡ ಆಟವಾಡುವದನ್ನೂ ಬಿಟ್ಟೆವು. ಮನೆಯಲ್ಲಿಯು ಹಿರಿಯರು ನಾವು ಹಾಗೆ ಮಾಡುವದಕ್ಕೆ ಅವ ಕಾಶಕೊಡುತ್ತಿರಲಿಲ್ಲ. ನಾನೂ ಜಾಣ ವಿದ್ಯಾರ್ಥಿಗಳಲ್ಲೊಬ್ಬನಾಗಿ ಮಹ ಮ್ಮದನನ್ನು ಹಳಿಯುವವನಾಗಿದ್ದೆ.

ಆ ವರುಷ ನಮ್ಮೂರಲ್ಲಿ ರುಕ್ಮಿಣಿ ಸ್ವಯಂವರ ನಾಟಕವಾಗತಕ್ಕ ದ್ದಿತ್ತು. ರುಕ್ಮಿಣಿಯ ಪಾತ್ರವನ್ನು ಮಹಮ್ಮದನೆ ತೆಗೆದುಕೊಂಡಿದ್ದ. ಪ್ರತಿ ದಿವಸ ತಾಲೀಮು ನಡೆಯುತ್ತಿತ್ತು. ಮಹಮ್ಮದನ ಕಂಠವಾದರೂ ಮಧುರ. ಮಹಮ್ಮದನಲ್ಲಿ ಈಗ ಬಹಳ ಬದಲಾವಣೆ ಒಡೆದು ಕಾಣುತ್ತಿತ್ತು. ತಲೆಯ ಮೇಲಿನ ಕೂದಲನ್ನು ಇನ್ನೂ ಉದ್ದವಾಗಿ ಬಿಟ್ಟ. ಮೇಲಾಗಿ ನಿರ್ಭೀತನಾಗಿ ಓಣಿಯಲ್ಲಿ ಬೀಡಿ ಸೇದುತ್ತ ತಿರುಗಾಡಹತ್ತಿದ. ನಮಗೆಲ್ಲ ಮಹಮ್ಮದನನ್ನು ಮಾತನಾಡಿಸುವದಕ್ಕೆ ಅಂಜಿಕೆ. ಯಾಕಂದರೆ ಮನೆಯಲ್ಲಿ ಹಿರಿಯರು, ಶಾಲೆ ಯಲ್ಲಿ ಗುರುಗಳೂ ನಮ್ಮನ್ನು ಹೊಡೆಯುತ್ತಿದ್ದರು—ನಾವೂ ಉಡಾಳ ರಾದೇವೆಂಬ ಅಂಜಿಕೆಯಿಂದ. ಚಾಂದಬೀ ಮಾತ್ರ ಮಗನ ಮಂಗತನಕ್ಕೆ ಬಹಳೇ ಮರಗುತ್ತಿದ್ದಳು. ಆದರೆ ಅವನಿಗೆ ಊಟ ತಿನಿಸುಗಳಿಗೇನೂ ಕೊರತೆ ಮಾಡಲಿಲ್ಲ.

ರುಕ್ಮಿಣಿ ಸ್ವಯಂವರ ನಾಟಕವಾಡುವ ದಿನವದು. ಊರಲ್ಲೆಲ್ಲ ಸಂಭ್ರಮ. ಹಿರಿಯರು, ಹುಡುಗರು, ಎಲ್ಲರೂ ಆಟ್ಟದ ಹತ್ತಿರವೇ ಸುಳಿದಾಡುತ್ತಿದ್ದರು. ನನಗೆ ಪಾತ್ರ ಹಾಗೆ ಮಾಡುವದಕ್ಕೆ ನಮ್ಮ ಮನೆಯವರು ಅವಕಾಶ ಕೊಡಲಿಲ್ಲ. ಏಕೆಂದರೆ ಶಾಲೆ ತಪ್ಪಿಸಿ ಅಡ್ಡಹಾದಿ ಹಿಡಿಯಬಾರದೆಂಬ ಇಚ್ಛೆಯಿಂದ ಕಟು ಕಠೋರವಾದ ಕಾನೂನು ಮಾಡಿ ನನ್ನನ್ನು ಬಂದು ಶಾಲೆಗೆ ಅಟ್ಟಿಯೇ ಬಿಟ್ಟರು. ಅಂದು ಮಹಮ್ಮದ ರುಕ್ಮಿಣಿಯ ರೂಪದಲ್ಲಿ ಕಂಡುಕೊಳ್ಳುವವ. ಹೇಗೆ ನಾಟಕವಾಡುತ್ತಾನೋ ನೋಡಬೇಕೆಂದು ನಾವೆಲ್ಲರೂ ಕೂತೂಹಲಿಗಳಾಗಿದ್ದೆವು. ರಾತ್ರಿಯಾಯಿತು; ನಾಟಕವೂ ಪ್ರಾರಂಭವಾಯಿತು. ರುಕ್ಮಿಣಿಯ ಪ್ರವೇಶವಾದೊಡನೆ ಎಲ್ಲರೂ ಚಪ್ಪಾಳೆ ಬಾರಿಸಿದರು. ಅಂದಿನ ನಾಟಕದಲ್ಲಿ ರುಕ್ಮಿಣಿಯ ಪಾತ್ರವಹಿಸಿದ ಮಹಮ್ಮದ ಅತ್ಯುತ್ತಮವಾಗಿಯೇ ಅಭಿನಯಿಸಿ ಊರ ಜನರಿಂದ "ವಾಹವ್ವಾ" ಅನಿಸಿಕೊಂಡ! ನಮ್ಮ ಶಿಕ್ಷಕರಾದರೂ ನಾಟಕಕ್ಕೆ ಬಂದಿದ್ದರು. ಮುಖ್ಯಾಧ್ಯಾಪಕರು "ಮಹಮ್ಮದ ಬಹಳ ಜಾಣ ಹುಡುಗ. ಆದರ ಉಡಾಳ" ಎಂದು ಶರಾ ಹಾಕಿದರು. ಮತ್ತೊಬ್ಬರು "ಹೌದು ಹೌದು" ಎಂದರು ಊರ ಹೆಂಗಳೆಯರೆಲ್ಲ ಮಹಮ್ಮದನನ್ನು ಹೊಗಳುವವರೆ. ಚಾಂದಬಿ ರುಕ್ಮಿಣಿಯ ಪಾತ್ರದಲ್ಲಿ ತನ್ನ ಮಗನನ್ನು ಕಂಡು ಸಂತೋಷಪಟ್ಟಳು. ತನಗೆ ಹೆಣ್ಣು ಮಗುವಿಲ್ಲಾ ಎಂಬ ಭಾವ ಮೂಡಿರಬೇಕು ಪಾಪ ಅವಳಿಗೆ. ಮಹಮ್ಮದ ಊರ ಜನರ ಮನಸ್ಸನ್ನೆಲ್ಲ ಸೆಳೆದುಕೊಂಡ.

* * *

ನಾನು ಹಿಂದಿನ ದಿನಗಳ ರಸ ನಿಮಿಷಗಳನ್ನು ನೆನೆಯಿಸಿಕೊಳ್ಳುತ್ತ ಕುಳಿತಾಗ ರಾಮರಾಯರು ತಮ್ಮ ಎಲೆ ಅಡಕೆ ಸಾಮಗ್ರಿ ತೆಗೆದುಕೊಂಡು ಬಂದು "ಮತ್ತೇನು ಎಲ್ಲಾ ಆರಾಮ ಧಾರವಾಡದಾಗ" ಎಂದು ನನ್ನ ವಿಚಾರದೆಳೆಯನ್ನು ಹರಿದರು!

"ಹೂಂ ನೆಟ್ಟಗ ನಡದದ. ಹಳ್ಳಿನ್ಯಾಗ ನೆಟ್ಟಗ ಅಂತಾರ ಹಿರೇರು" ಎಂದು ಆಕಳಿಸಿದೆ.

"ಹೌದರೀ....ಹಳ್ಳಿ ನೆಟ್ಟಗ ಖರೇ. ಆದರ ಈಗ ರೈತರು ಮೊದಲಿನ್ಹಾಂಗ ದುಡಿಯುದುಲ್ಲಾ" ಎಂದು ಹೇಳಿದರು.

" ನಮ್ಮ ರೈತಾ ಲಾವಣೀ ದುಡ್ಡು ಕೊಟ್ಟಿಲ್ಲ" ಎಂದು ನಾನು ಹೇಳಿದೆ. ಅದಕ್ಕೆ ರಾಯರು " ನಿಮ್ಮ ರೈತ ಯಾರ. ?........ಹ....ಹ. ಅವನ ಹಿತ್ತಲ ಮನಿ ತಿಪ್ಪ ! " ಎಂದು ನಕ್ಕರು. ಅವರ ನಗುವಿನಲ್ಲಿಯೂ ಒಂದು ಅರ್ಥವಿತ್ತು.

ನಾನು ಆ ಮಾತು ಅಲ್ಲಿಯೇ ಮುಗಿಸಿ ಮತ್ತೆ ಮಹಮ್ಮದಸಾಬನ ಮಾತು ಎತ್ತಿದೆ. " ಮಹಮ್ಮದಸಾಬ ನಾಲ್ಕು ಮೋಟರು ಇಟ್ಟಾನಂತಲ್ಲಾ" ಎಂದೆ ಅದಕ್ಕ ರಾಮರಾಯರು ಒಮ್ಮೆ ಎದ್ದು ತಂಬಾಕು ಉಗಳಿ " ಎಲ್ಲಾ ಹೇಳತೇನಿ ಕೇಳ್ರಿ " ಎಂದರು. ನನಗೂ ಬಹಳ ಹರ್ಷವಾಯಿತು. ರಾಯರು ಸುರುವು ಮಾಡಿದರು. " ಈ ಮಹಮ್ಮದ ಬಹಳ ಉಡಾಳ ಹುಡುಗ. ಇವನ ತಾಯಿ ಚಾಂದಬಿ ಇವನ ಕಾಲಾಗ ಗೋಳಾಡಿ ಗೋಳಾಡಿ ಸತ್ತು ಹೋದಳು. ಆ ಮೇಲೆ ಇದ್ದ ಒಂದು ಮನಿ ಮಾರಿ ಮೋಟಾರ ಕೊಂಡು ತಂದ. ಮೋಟಾರ ಧಂದೆ ಕೇಳಬೇಕ ? ದಿನಾ ಬೆಳಗಾದ್ರ ರೊಕ್ಕ ಬರಲಿಕ್ಕೆ ಹತ್ತಿತು. ನಾಲ್ಕು ವರುಷ ಅನ್ನೋದರಾಗ ಮಹಮ್ಮದ ನಾಲ್ಕು ಮೋಟರೇ ಖರೀದಿ ಮಾಡಿದ ! ಈ ವರ್ಷ ಒಂದು ಗಿರಣೀನೂ ಹಾಕ್ಯಾನ " ಎಂದು ಮತ್ತೆ ತಂಬಾಕು ಹಾಕಿಕೊಂಡರು.

" ಈಗ ಯಾರ ಮನ್ಯಾಗ ಇರತಾನ ?" ಎಂದೆ.

" ಅದನ್ನs ಹೇಳತೇನಿ ಕೇಳ್ರಿ. ಹೋದ ವರ್ಷ ಒಂದು ದೊಡ್ಡ ಮಸೀನ ಖರೀದಿ ಹಿಡಿದಾನ—ನಮ್ಮ ಗೌಡರ ಮನಿ ಬಲಗಡೆ ಮನಿ ! "

" ಆ ದೊಡ್ಡ ಮನಿ ಮಹಮ್ಮದ ಖರೀದಿ ಹಿಡದಾನ ?" ಎಂದು ನಾನು ಬೆರಗಾಗಿ ಕೇಳಿದೆ. ಮತ್ತೆ ರಾಯರು " ಲಕ್ಷ್ಮೀ ಬರೋ ಕಾಲ. ಇರಲಿ— ಈಗ ನಮ್ಮ ಮನ್ಯಾಗ ಚಿಮಣೀ ಯಣ್ಣಿಲ್ಲ–ಆದರ ಮಮ್ಮದನ ಮನ್ಯಾಗ ದಿನಾ ಪೆಟ್ರೋಮ್ಯಾಕ್ಸ ಉರಿತದ ತಿಳಿತ ? "

" ಹಂಗಾರ ಮಹಮ್ಮದ ಈಗ ಸಾವುಕಾರ ಅನ್ರಿ "

" ಸಾವುಕಾರನೂ ಆಗ್ಯಾನ. ಊರಾಗ ದೊಡ್ಡಮನಸ್ಯಾನೂ ಆಗ್ಯಾನ. ಹುಡುಗ ಒಳ್ಳೇವ. ನಮ್ಮ ಮಾತಂತೂ ಎಂದೂ ಮೀರೂದುಲ್ಲ" ಎಂದು ಅಭಿಪ್ರಾಯ ಪಟ್ಟರು.

ನಾನು ಮತ್ತೆ " ಲಗ್ನಾ ಮಾಡಿಕೊಂಡಾನೇನು ಸಾಬಾ ?" ಎಂದೆ.

" ಓಹೋ ತಿರುಗಿ ನಾಲ್ಕು ಮಕ್ಕಳಾಗ್ಯಾವ. ಎಲ್ಲಾ ಛಲೋ ನಡದದ. ಈ ಹುಡುಗಾ ಇಷ್ಟ ಮುಂದ ಬಂದಾನು ಅಂತ ಯಾರಿಗೆ ತಿಳಿದಿತ್ತು" ಎಂದು ನುಡಿದು ಎದ್ದರು. ರಾತ್ರಿ ಈಗಾಗಲೆ ಬಹಳವಾಗಿತ್ತು. ನಾನೂ ದಣಿದಿದ್ದೆ; ಮಲಗಿಕೊಂಡೆ. ರಾತ್ರಿಯಲ್ಲ ಸುಖವಾಗಿ ನಿದ್ದೆಗೈದೆ !

ಮರುದಿನ ನಸುಕಿನಲ್ಲಿಯೇ ಎದ್ದು ಮೋರೆತೊಳೆದುಕೊಂಡು ನಮ್ಮ ರೈತನ ಮನೆಗೆ ಹೋದೆ. ತಿಪ್ಪಣ್ಣ ತನ್ನ ಎತ್ತಿನ ಮೈ ತಿಕ್ಕುತ್ತ ನಿಂತಿದ್ದ. ನನ್ನನ್ನು ಕಂಡು " ಏನರೀ ರಾಯರ ಕುಂದರ್ರಿ " ಎಂದು ಕಂಬಳಿ ಹಾಸಿದ. ತಿಪ್ಪಣ್ಣ ನನ್ನ ಮೋರೆ ನೋಡಿ " ನೀವು ನಮ್ಮ ರಂಗಾಚಾರ ಮಕ್ಕಳಲ್ಲ?" ಎಂದು ಪ್ರಶ್ನಿಸಿದ.

ನಾನು ಅದಕ್ಕೇ " ಹೌದು-ತಿಪ್ಪಣ್ಣ. ನಮ್ಮ ಲಾವಣೀ ಹಣ ಇಷ್ಟ ಕೊಟ್ಟು ಬಿಡಪಾ " ಎಂದೆ. ತಿಪ್ಪಣ್ಣ ತುಸು ಮೋರೆ ಗಂಟಿಕ್ಕಿ " ಈ ವರಸಾ ಕರಿಗಾಲ. ನನ್ನಕಡಿಂದ ಏನೂ ಕೊಡಾಕ ಆಗುದುಲ್ಲರಿ " ಎಂದು ಕಣ್ಣು ಕೆಂಪಗೆ ಮಾಡಿದ ! ನನಗೂ ಸಿಟ್ಟು ಬಂದಿತು " ನಾನು ಏನಾದರೂ ಬಿಡೂದುಲ್ಲಾ " ಎಂದು ಗಟ್ಟಿಯಾಗಿಯೇ ಹೇಳಿದೆ. ತಿಪ್ಪಣ್ಣ ಏನು ತಿಳಿದುಕೊಂಡನೋ ಒಮ್ಮಿಂದೊಮ್ಮೆಲೇ, " ರಾಯರ ಈ ಬಡಿದಾಟ ಬ್ಯಾಡ. ನಮ್ಮ ಮಹಮ್ಮದಸಾಬರ ಕಡೇ ನಡಿರಿ. ಅವರು ಹೇಳಿದ್ಹಾಂಗ ಮಾಡೋಣ " ಎಂದು ಅತ್ತ ಕಡೆ ಹೊರಟೇಬಿಟ್ಟ. ಮಹಮ್ಮದಸಾಬ ಇಷ್ಟು ಪ್ರತಿಷ್ಠಿತ ಮನುಷ್ಯನಾದದ್ದು ಕೇಳಿ ನನಗೆ ಅವನ ಬಗ್ಗೆ ಇನ್ನೂ ಆದರ ಹೆಚ್ಚಾಯಿತು. ನಾನೂ ಮಹಮ್ಮದಸಾಬನ ಮನೆಗೆ ಹೊರಟೆ. ನಾನೂ ಬಾಗಿಲಿಗೆ ಬರುತ್ತಲೇ ಮಹಮ್ಮದಸಾಬಾ ಬಹಳ ಆದರದಿಂದ ನನ್ನನ್ನು ಬರಮಾಡಿಕೊಂಡ. ಎಲ್ಲರೂ ಕುಳಿತುಕೊಂಡೆವು. ನಮ್ಮ ರೈತ ತನ್ನ ದುಃಖವನ್ನೆಲ್ಲ ತೋಡಿಕೊಂಡ. ನಾನೂ ಎಲ್ಲವನ್ನೂ ಹೇಳಿದೆ. ಮಹಮ್ಮದಸಾಬ ಏನೋ ಯೋಚನೆ ಮಾಡಿ ತಿಪ್ಪಣ್ಣನಿಗೆ " ಎಷ್ಟು ಲಾವಣಿ ಹಣ ?" ಎಂದ.

" ನಾಕನೂರು ರೂಪಾಯಿ. ಹ್ಯಾಂಗಕೊಡೋದು ನೀವಃ ಹೇಳ್ರಿ " ಎಂದ.

" ತಿಪ್ಪಣ್ಣ, ನಾ ಖರೇಮಾತ ಹೇಳತೇನಿ. ರಾಯರು ಒಳ್ಳೇ ಮನುಷ್ಯರು. ನೀ ಅವರಿಗೆ ಇಲ್ಲದ್ದ ಹೇಳಬ್ಯಾಡ " ಎಂದು ಮಹಮ್ಮದ ತಿಳಿಹೇಳಿದ.

ತಿಪ್ಪಣ್ಣ ಮತ್ತೆ “ ಸಾಃಬರ ನೀವು ಹ್ಯಾಂಗ ಹೇಳತೇರಿ ಹಾಂಗ ಮಾಡತೇನ್ರಿ” ಎಂದು ಒಪ್ಪಿಕೊಂಡ.

ಮುಹಮ್ಮದಸಾಬಾ ನನ್ನ ಕಡೆಗೆ ತಿರುಗಿ “ರಾಯರ, ಈ ವರ್ಷ ಬಹಳ ಕೇಡು. ಮುನ್ನೂರು ರೂಪಾಯಿ ತೊಗೊಂಡು ಮುಗಿಸಿಕೊಳ್ಳಿರಿ ” ಎಂದು ಹೇಳಿ ಬಿಟ್ಟಾ. ನಾನೂ ಒಪ್ಪಿಕೊಂಡೆ. ಮುಹ್ಮದಸಾಬನ ಈ ತಿರ್ಪು ಬಹಳ ಜಾಣತನದ್ದು. ನ್ಯಾಯದ ಮೂಲವನ್ನೇ ಮುಃರಿದು ಮತ್ತೆ ನಮ್ಮ ರೈತನಿಗೂ ನಮಗೂ ಮೊದಲಿನಂತೆ ನಡೆದುಕೊಳ್ಳುವದಕ್ಕೆ ಹೇಳಿದ. ತಿಪ್ಪಣ್ಣ ಆಗಲೇ ರೂಪಾಯಿ ತಂದು ಒಪ್ಪಿಸಿದ! ನಮ್ಮ ಹಿರಿಯರು ನಾಲ್ಕು ಸಲ ಅಡ್ಡಾಡಿ ಹೋಗಿದ್ದರೂ ತಿಪ್ಪಣ್ಣ ಹಣಿದಿರಲಿಲ್ಲ. ಮುಹಮ್ಮದಸಾಬನ ಮಾತಿಗೆ ಇಷ್ಟೊಂದು ಬೆಲೆ ಇರಬೇಕಾದರೆ ಅವನಲ್ಲಿ ಹಳ್ಳಿಗರ ಜೀವನದಲ್ಲಿ ಬೆರೆತು ಬಾಳುವ ಹದವಿರಲೇಬೇಕು.

ಮುಹಮ್ಮದಸಾಬ ನನಗೆ ನಾಲ್ಕಾರು ದಿವಸ ಹಳ್ಳಿಯಲ್ಲಿದ್ದು ಹೋಗಬೇಕೆಂದು ಬಹಳ ಆದರಪೂರ್ವಕವಾಗಿ ಹೇಳಿದ. ಆದರೆ ನಾನು ಮಾತ್ರ ಅನೇಕ ಕೆಲಸಗಳ ಗದ್ದಲದಲ್ಲಿದ್ದೆನಾದ್ದರಿಂದ ಮತ್ತೊಮ್ಮೆ ರಜೆಯ ದಿನಗಳಲ್ಲಿ ಬರುವೆನೆಂದು ಹೇಳಿದೆ. ಸಂಜೆಯ ಮೋಟಾರಿಗೆ ಊರಿಗೆ ಹೊರಡುವದು ಗೊತ್ತಾಯಿತು.

ನಾನು ರಾಮರಾಯರ ಮನೆಗೆ ಬಂದು ಎಲ್ಲವನ್ನೂ ಹೇಳಿದೆ. ಅವರು “ ಮುಹಮ್ಮದಸಾಬ ಬಾಯಿ ಹಾಕಿದಾ ಅಂದ್ರ, ಈ ಊರಾಗಿನ ರೈತರು ಹೇಳಿದ್ಹಾಂಗ ಕೇಳತಾರ ” ಎಂದು ಹೇಳಿ ನನ್ನನ್ನು ಊಟಕ್ಕೆಬ್ಬಿಸಿದರು. ಊಟ ಮುಗಿಸಿಕೊಂಡು, ವಾಮ ಕುಕ್ಷಿಯಾದ ಬಳಿಕ ಮೋಟಾರಸ್ಟ್ಯಾಂಡಿಗೆ ಹೋದೆ. ಮುಹಮ್ಮದಸಾಬ ಅಧಿಕಾರಿಯಂತೆ ಗಿಡದಡಿಯಲ್ಲಿಯ ಬೆಂಚಿನ ಮೇಲೆ ಕುಳಿತುಕೊಂಡಿದ್ದ. ನಾನು ಬಂದಕೂಡಲೆ ಮೋಟಾರಿನಲ್ಲಿ ಫ್ರಂಟ ಸೀಟಿಗೆ ಕುಳ್ಳಿರಿಸಿ “ ಹೋಗಿ ಬರ್ರೀ....ನಮ್ಮನ್ನ ಮರಿಬ್ಯಾಡ್ರೀ ” ಎಂದು ಹೇಳುವಾಗಲೇ ಮೋಟರು ಹೊರಟಿತು.

ಮೋಟರ ವೇಗವು ಹೆಚ್ಚಾದಂತೆ ಹಳ್ಳಿಯು ಕಾಣದಾಯಿತು. ಮುಹಮ್ಮದಸಾಬನ ಮೂರ್ತಿ ಮಾತ್ರ ನನ್ನ ಮನದಲ್ಲಿ ಅಚ್ಚೊತ್ತಿದಂತೆ ಇನ್ನೂ ಉಳಿದಿದೆ.

———

# ಯಾರು ಹೊಣೆ ?

●

"ಧಡ್........ಧಡಲ್........ಧಡಕ್" ಗಾಡಿ ನಿಂತಿತು. ಹೊರಗೆ ಮೋರೆಹಾಕಿ ನೋಡಿದೆ. ಕತ್ತಲು ಕವಿದಿತ್ತು. ಚುಕ್ಕೆಗಳು ಪಕಪಕ ಕಣ್ಣು ಬಿಡುತ್ತಿದ್ದವು. ಮೂಡಲ ಗಾಳಿ 'ಸಿಳ್ಳ್' ಎಂದು ಬೀಸುತ್ತಿತ್ತು. ನಾನು ಇಳಿಯಬೇಕಾದ ನಿಲ್ದಾಣವದು. ಹಳ್ಳಿಯ ಹೊಲದ ಕೆಲಸಕ್ಕಾಗಿ ಹೋಗಬೇಕಾದ ನಾನು ಕಚೇರಿಯ ಕೆಲಸ ತೀರಿಸಿಕೊಂಡು ರಾತ್ರಿಯ ಗಾಡಿಯನ್ನು ಹಿಡಿಯಬೇಕಾಗಿದ್ದಿತು. ಕೆಳಗಿಳಿದು ಸುತ್ತಲೂ ನೋಡಿದೆ ದೂರದಲ್ಲಿ ನಿಲ್ದಾಣದ ದೀಪ ಮಿನುಗುತ್ತಿತ್ತು. ಗಾಡಿ 'ಕೊಂಯ್ಯ' ಎಂದು ಕೂಗಿದ್ದೇ ತಡ, ಹೊರಟುಬಿಟ್ಟಿತು. ನಾನು ನಿಲ್ದಾಣ ಸೇರುವಷ್ಟರಲ್ಲಿಯೇ ಪೋರ್ಟರ ದೀಪ 'ಉಫ್' ಮಾಡಿದ್ದ ! ನಿದ್ದೆಗಣ್ಣಿನಲ್ಲಿದ್ದ ಸ್ಟೇಶನ್‌ಮಾಸ್ತರ ಮತ್ತೆ ಹೋಗಿ ಹಾಸಿಗೆಯಲ್ಲಿ ಒರಗಿಬಿಟ್ಟ. ಅಲ್ಲಿ ಇಲ್ಲಿ ನೋಡಿದೆ. ಕೆಲಜನ ಗೊರಕೆ ಹೊಡೆಯುತ್ತಿದ್ದರು. ನಾನೂ ಒಂದು ಮೂಲೆಯಲ್ಲಿ ಚದ್ದರ ಹೊದ್ದುಕೊಂಡು ಕುಳಿತೆ ! ರಾತ್ರಿ ಹೇಗಾದರೂ ಕಳೆಯಬೇಕಾಗಿತ್ತು. ಕತ್ತಲುಗವಿಯಲ್ಲಿ ಯಾವನೊ ಒಬ್ಬ ಹುಡುಗ ಬಂದಂತೆ ಕಂಡಿತು. ಸ್ಟೇಶನ್‌ಮಾಸ್ತರು ಅದೇ ಸೇದಿ ಒಗೆದ ಕೊರೆ ಬೀಡಿಯನ್ನು ಹುಡುಗ ಕೂಡಲೇ ಎತ್ತಿಕೊಂಡು ಸೇದುತ್ತ ನಿಂತ. ಕತ್ತಲೆಯಲ್ಲಿಯೂ ಕೂಡ ಹರಕ ಬಟ್ಟೆ ತೊಟ್ಟಿದ್ದಾನೆಂಬದು ತೋರುತ್ತಿದ್ದು, ಗದಗದ ನಡುಗುತ್ತಿದ್ದ. ಬೀಡಿ ಸೇದುತ್ತ ಒಳಗೆ ಬಂದು ನನ್ನ ಹತ್ತರವೇ ಕಟಾಂಜನದ ಹತ್ತರ ಅಪ್ಪುಗೈ ಹಚ್ಚಿಕೊಂಡು ನಿಂತುಕೊಂಡ. ನಾನು ಸಾವಕಾಶವಾಗಿ "ಯಾರೋ ನೀನು ?" ಎಂದೆ.

ಅದಕ್ಕೆ ಆ ಹುಡುಗ ಮರುಮಾತಾಗಿ "ನಾನರೀ...........ನಾನರಿ" ಎಂದ. ನಾನು ಅವನ ಮಾತಿಗೆ ತುಸು ಸಿಟ್ಟಾಗಿ "ನಾ ಅಂದರs............ ಯಾರು" ಅಂದೆ.

"ನಾನರೆ ಕರಿಯಾರಿ........ಅಪ್ಪಾ ಅವರ" ಎಂದು ಗಕ್ಕನೆ ನೆಲಕ್ಕೆ ಹು....ಹು....ಹು' ಎನ್ನುತ್ತ ಕುಳಿತುಕೊಂಡ. ಕರಿಯ ಶಬ್ದವೂ ಕೂಡ

ಅಜ್ಞಾನವನ್ನು ಸೂಚಿಸುವಂತಿದೆ. ಎಂದು ಮನದಲ್ಲಿಯೇ ಅಂದುಕೊಂಡು ತುಸುಹೊತ್ತು ಸುಮ್ಮನೆ ಕುಳಿತು ಮತ್ತೆ ವಿಚಾರಕ್ಕೇ ಪ್ರಾರಂಭಮಾಡಿದೆ. ಹುಡುಗ ಬಡವನಿದ್ದದ್ದೇನೊ ಒಡೆದು ಕಾಣುತ್ತಿತ್ತು. ಆದರೆ ಅವನ ಲಕ್ಷ ತೆಗೆದುಕೊಳ್ಳುವವರು ಈ ಜಗತ್ತಿನಲ್ಲಿ ಯಾರಾದರೂ ಇದ್ದಾರೋ ಇಲ್ಲವೋ ತಿಳಿಯದಾಯಿತು. ಹುಡುಗ 'ಕೊಸ್-ಕೊಸ್' ಕೆಮ್ಮಹತ್ತಿದ. ನಾನು ಮತ್ತೆ ಮಾತು ಸುರುವುಮಾಡಿದೆ; "ಅಲ್ಲೋ, ಬೀಡಿ ಸೇದತೀ, ಇಷ್ಟು ಸಣ್ಣ ಹುಡಗ ನೀನು ! ಕೆಮ್ಮು ಹತ್ತದೇನು ಮಾಡೀತು ?"

"ತಂಡಿ ಹತ್ತತೈತರಿ, ಅದಕ್ಕೆ ಸೇದಿದೆ." ಅವನ ಅಜ್ಞಾನಕ್ಕೆ ನನ್ನ ಮನಸ್ಸಿಗೆ ಬಹಳ ವ್ಯಥೆಯಾಯಿತು. "ನಿಮ್ಮ ಅಪ್ಪ ಅವ್ವಗ ಗೊತ್ತಾದರ ನಿನಗೆ ಪೆಟ್ಟು ಬೀಳಬಹುದಲ್ಲ ?" ಎಂದೆ. ನನ್ನ ಮಾತು ಮುಗಿಯುವದೇ ತಡ ಹುಡುಗ "ನಮ್ಮಪ್ಪ ಅವ್ವ ಸತ್ತಾರ್ರಿ" ಎಂದ.

"ಅಯ್ಯೋ ಪಾಪ ! ಅನಾಥ ಹುಡುಗ." ಎಂದು ಮನದಲ್ಲಿಯೇ ಅಂದು ಮತ್ತೆ ಯೋಚನೆ ಮಾಡುತ್ತ ಕುಳಿತುಕೊಂಡೆ. ವಿಚಾರಗಳು ಸುರುಳಿ ಸುರುಳಿಯಾಗಿ ಹೊರಡಹತ್ತಿದವು. ಇಂಗ್ಲಂಡ, ರಶಿಯಾ ಮೊದಲಾದ ರಾಷ್ಟ್ರಗಳಲ್ಲಿ ಹೀಗೆ ಸಣ್ಣ ಹುಡುಗರನ್ನು ಸರಕಾರವು ಹೇಗೆ ಬೀಟ್ಟೀತು ? ಮತ್ತು ವಿದ್ಯಾರ್ಥಿಗಳ ಶಿಕ್ಷಣ ಮೊದಲಾದವುಗಳನ್ನು ಸರಕಾರವು ದಕ್ಷತೆ ಯಿಂದ ನೋಡಿಕೊಳ್ಳುತ್ತಿದೆ. ಆದರೆ ನಮ್ಮ ದೇಶದಲ್ಲಿ........! ಹೀಗೆ ಏನೇನೋ ವಿಚಾರ ನಡೆಯಿತು. ಅಲ್ಲಿ ಇದ್ದ ಜನರಲ್ಲಿ ಎಚ್ಚರಿದ್ದವರೆಂದರೆ ನಾನು ಹಾಗೂ ಕೆಮ್ಮುತ್ತ ಕುಳಿತ ಆ ಅನಾಥ ಬಾಲಕ. ನಮ್ಮ ಮಾತು ಯಾರೂ ಕೇಳುವದಕ್ಕೆ ಅವಕಾಶವಿರಲಿಲ್ಲ. ಪಾಪ ಅವರಿಗೆ ಕೇಳುವ ಪರಿಸ್ಥಿತಿ ಇರಲಿಕ್ಕಿಲ್ಲ !

"ಅಲ್ಲೋ ತಮ್ಮಾ, ನಿಮ್ಮ ಕಡೆಯವರು ಮತ್ತಾರೂ ಇಲ್ಲವೇನೋ?"

"ಅದಾರ್ರಿ ನಮ್ಮ ಮಾವ. ಅವರು ನನಗ ಬಹಳ ಹೊಡಿತಾರ್ರಿ."

"ಮತ್ತ ನೀ ಹೀಂಗ ಬೀಡಿ ಸೇದಿದರ ಬಿಟ್ಟಾರ ಹೇಳು" ಅಂದೆ.

"ಮನ್ಯಾಗ ಕೆಲಸ ಬಹಳ ಹಚ್ಚಿದರಿ, ನನಗ ಬ್ಯಾಸರ ಬಂತ್ರಿ."

"ಸಾಲಿಗೆ ಕಳಿಸಲಿಲ್ಲೇನೊ ನಿನ್ನ ಅವರು ?"

"ಇಲ್ಲರಿ" ಎಂದ. ಗಾಳಿ ಮತ್ತೆ ಭರ್ ಎಂದು ಬೀಸಿತು.

ನಿಲ್ದಾಣದ ಮೇಲಿರುವ ಮರದ ಎಲೆಗಳು ಬಳಬಳ ಉದುರಿದುವು. ಮೈ ಜುಮ್ಮೆನ್ನಲು ಮತ್ತೂ ಗಟ್ಟಿಯಾಗಿ ಹೊದ್ದುಕೊಂಡು ಕುಳಿತೆ ಮೈಯಲ್ಲಿ ಉಣ್ಣೆಯ ಸ್ವೆಟರ ಇತ್ತು. ಹಾಗೂ ಮೇಲೊಂದು ಕೋಟು ಬೇರೆ!

ಆ ಹುಡುಗನ ಗತಿಯೇನು ? ಹರಕಲು ಬಟ್ಟೆ, ಮೇಲೆ ಹೊದೆಯುವ ದಕ್ಕಂತೂ ಏನೂ ಇಲ್ಲವೇ ಇಲ್ಲ !

ಈ ವರೆಗೆ ವಿಚಾರ ಮಾಡಿದ ನನ್ನ ಹತ್ತಿರವೂ ಅವನಿಗೆ ಕೊಡುವದಕ್ಕೆ ಬಟ್ಟೆ ಇರಲಿಲ್ಲ. ಮನಸ್ಸು ನನ್ನ ಮನೆಯ ಕಡೆಗೆ ಎಳೆಯಿತು. ನನ್ನ ಪುಟ್ಟು ರಗ್ಗಿನ ಮುಸುಕಿನಲ್ಲಿ ಚೆನ್ನಾಗಿ ನಿದ್ದೆ ಹೊಡೆಯುತ್ತಿರಬಹುದು ! ತಾಯಿ ಮಲಗುವಾಗ ಅವನಿಗೆ ಬಿಸಿ ಹಾಲು ಕುಡಿಸಿ ಮಲಗಿಸಿದ್ದಾಳೆ. ಅವನು ಮುಂಜಾನೆ ಏಳುವದೊಂದೇ ತಡ. ಮತ್ತೆ ಅವನಿಗೆ ಬಿಸಿ ತಿನಿಸು ಸಿದ್ಧವಾಗಿ ರುತ್ತದೆ ! ಮನೆಯ ವಿಚಾರ ಬಿಟ್ಟು ಕರಿಯನ ಕಡೆಗೆ ಹೊರಳಿ ನೋಡಿದೆ. ಏನು ಅಂತರ ! ಮನವು ಮರುಗಿತು. ಅರಿಯದ ಅಳಲು ತೀವ್ರವಾಗಿ ಮನ ವನ್ನು ಭೇದಿಸುತ್ತಿರುವಾಗ ' ಯಾಕೆ ಈ ಭೇದ ಜಗದಲ್ಲಿ ' ಎಂಬ ಒಳದನಿ ಹೊರಹೊಮ್ಮಿತು. ಹುಡುಗ ಮಾತ್ರ ಗೋಡೆಗೊರಗಿ ತೆಪ್ಪಗೆ ಕುಳಿತಿದ್ದ. ಅವ ನನ್ನು ಮತ್ತೆ ನಾನೇ ಕೆಣಕಿದೆ.

" ನೀನು ಈಗ ಇರುವದಾದರೂ ಎಲ್ಲಿಯೋ ?"

" ಶೆಟ್ಟರ ಮನಿಯಾಗರಿ. "

" ನಿಮ್ಮೂರ ಶೆಟ್ಟರ ಮನಿಯಲ್ಲಿಯೋ ?"

" ಅಲ್ಲರೀ ರಾಯರ........ಈ ಊರ ಶೆಟ್ಟರ ಮನಿಯಾಗರಿ. "

" ನಿನಗ ಪಗಾರ ಕೊಡತಾರೇನು ಶೆಟ್ಟರು ?"

" ಇಲ್ಲರಿ. ಊಟ ಅರವಿ ಈಟೇರಿ "

ಈ ಮಾತು ಕೇಳಿ ನನ್ನ ವಿಚಾರ ಇಮ್ಮಡಿಸಿತು. ಹರಕ ಅರವೆ, ಇವನ ಮೈ ಮುಚ್ಚಿಲ್ಲ, ಊಟವಂತೂ ಏನು ಕೊಡತ್ತಾರೋ ತಿಳಿಯದಾಯಿತು.

" ಶೆಟ್ಟರ ಮನಿಯಾಗ ಏನ ಕೆಲಸ ಮಾಡತೀಯಪಾ ನೀ ?"

" ಮನಿಯಾಗಿನ ಕೆಲಸ ಹೇಳಿದ್ದರಿ. ಅಪ್ಪಾ ಅವರು ಹೇಳಿದ್ದು ಕೇಳಿ ಕೊಂಡು ಅಲ್ಲೇ ಅದೇನ್ರಿ. "

" ಶೆಟ್ಟರಿಗೆ ಮಕ್ಕಳಿದ್ದಾರೇನು ?"

" ಅದಾರ್ರಿ, ಮೂವರು. ಎಲ್ಲರೂ ಸಾಲೆಗೆ ಹೋಕ್ತಾರ್ರಿ. "

" ನೀ ಯಾಕ ಹೋಗೂಬಲ್ಲಪಾ ?"

" ನಮಗೆದಕ ಬೇಕರಿ, ಸಾಲೀ-ಬಡವರಿಗೆ ? "

ಬಡತನ ಎನ್ನುವದು ಎಂಥ ಭೀಕರ ರೋಗ ! ಹುಟ್ಟಿನಿಂದ ಸಾಯುವ ವರೆಗೆ ಒಂದೇ ಸಮನೇ ಜೀವ ಹಿಂಡುವ ರೋಗ. ಅಜ್ಞಾನದ ಕೂಪದಲ್ಲಿ ಕೆಡಹುವ ವೈರಿ! ಬಡತನ ತಂದೊಡ್ಡುವವರಾರು? ಅದು ಜನ್ಮಸಿದ್ಧವಾದದ್ದೇ? ಹೀಗೆ ಜನ ತಿಳಿದಿದೆಯಲ್ಲ 'ಅದರ ನಿವಾರಣೋಪಾಯ ಇಲ್ಲವೆ ಇಲ್ಲ. ಅನೇಕ ರೋಗಗಳಿಗೆ ಔಷಧಿ ಸಿದ್ಧವಾಗುತ್ತಿರುವಾಗ ಬಡತನ ರೋಗನಿವಾರಣೆ ಔಷಧಿ ಎಂದು ಸಿದ್ಧವಾದೀತು? ಅದು ಸಿದ್ಧವಾದಾಗ ಎಲ್ಲೆಲ್ಲಿಯೂ ಸುಖ ವಾಗಬಹುದಲ್ಲ ! ಹೊಟ್ಟೆ ತುಂಬ ಅನ್ನ, ಮೈತುಂಬ ಬಟ್ಟೆ, ಬುದ್ಧಿಗೆ ಆಹಾರವಿದ್ದಲ್ಲಿ, ಇನ್ನು ಮುಂದೆ ಏನು ಬೇಕು ಜನಕ್ಕೆ ?

ನಾನು ಸುಮ್ಮನೆ ಕುಳಿತದ್ದನ್ನು ಕಂಡು ಹುಡುಗ ಬೇಸತ್ತವನಂತೆ ಒಮ್ಮೆ ಆಕಳಿಸಿ ಹೊರಗೆ ಹೋಟುಹೋದ. ತುಸು ಹೊತ್ತಾಗಿರಬಹುದು. ಮರಳಿ ಬಂದು ಕುಳಿತುಕೊಂಡ. ರೇಲ್ವೆ ಗಡಿಯಾರ 'ಢಣ್-ಢಣ್-ಢಣ್' ಮೂರು ಬಾರಿಸಿತು. ನನ್ನ ಕಣ್ಣುಗಳು ಉರಿಯಹತ್ತಿದವು. ಆದರೆ ಮನೆ ಯಲ್ಲಿ ಮೆತ್ತಗೆ ಬೆಚ್ಚಗೆ ಒರಗುವ ನನಗೆ ಚಳಿಯಲ್ಲಿ ಹೇಗೆ ನಿದ್ದೆ ಬಂದೀತು ? ಜಗತ್ತಿನಲ್ಲಿ ಬಡ ಜನ ಕಷ್ಟಪಡುತ್ತಾರೆಂಬ ಮಾತು ಸತ್ಯ. ಅವರ ಬಗ್ಗೆ ನಮ್ಮೆಲ್ಲರಿಗೂ ಕಳಕಳಿ ಇರುವದೇನೋ ನಿಜ. ಆದರೆ ಸತ್ಯ ಸಂಗತಿ ನಿರ್ಧಾ ರಕ್ಕೆ ಬಂದಲ್ಲಿ, ನಮ್ಮ ತತ್ವ ಹೊರಬೀಳುತ್ತದೆ. ಮಧ್ಯಮಧ್ಯ ಹುಡುಗ ನಿಗೆ ಕೆಮ್ಮು ಹೆಚ್ಚಾಗಿ ನನಗೆ ಬಹಳ ತೊಂದರೆ ಬರುತ್ತಿತ್ತು. ಅವನನ್ನು ಮತ್ತೆ ಪ್ರಶ್ನೆ ಕೇಳಹತ್ತಿದೆ.

" ನೀ ಯಾಕ ಇವತ್ತ ಸ್ಟೇಶನ್ನಿಗೆ ಬಂದಿದ್ದಿ ?"

" ನಮ್ಮ ಶೆಟ್ಟರು ಊರಿಗೆ ಹೋದರ್ರಿ. ಅವರ ಗಂಟು ಹೊತ್ತಕೊಂಡು ಬಂದಿದ್ದಿನ್ರಿ. "

" ಊಟಮಾಡಿ ಬಂದಿಯಾ ?"

" ಹೂನ್ರಿ. ಎರಡು ರೊಟ್ಟಿ ಕೊಟ್ಟದ್ರಿ. "

" ಬಹಳ ಕೆಮ್ಮತಿದಿ, ಶೆಟ್ಟರಿಗೆ ಹೇಳಿ ಔಷಧ ಕುಡಿಯಲಾ ಮತ್ತೆ?

" ತಾನ ಹೊಕ್ಕತ್ರಿ ಕೆಮ್ಮು, ಅಗಸಿದ್ರ್ಯಾ ಬ್ಯಾಡರಿ. "

" ನೀ ಹೀಂಗ ಕೆಲಸ ಮಾಡಿಕೊಂತ ಇರಾವ ಏನಪ ತಮ್ಮಾ, ಶೆಟ್ಟರ ಮನಿಯಾಗ ?"

ಹುಡುಗನಿಗೆ ಯಾವ ಉತ್ತರವನ್ನೀಯಬೇಕೆಂದು ಹೊಳೆಯಲಿಲ್ಲ. ಅವನಿಗೆ ತನ್ನಾಭವಿಷ್ಯತ್ತು ದೊಡ್ಡದಿದೆ ಎಂಬ ಅರಿವು ಹೇಗೆ ಬರಬೇಕು ? ಅವನ ಜನ್ಮ ಈ ರೀತಿಯಾಗಿಯೇ ಸಾಗಬೇಕು. ಇಂದು ಸಣ್ಣ ಕೂಲಿ ಆಳಾಗಿ ದುಡಿಯುವ; ಮುಂದೆ ದೊಡ್ಡವನಾದಾಗ ದೊಡ್ಡ ಕೂಲಿಯಾಗುವ. ಇಷ್ಟೇ, ಈಗ–ಆಗಿನ ಅಂತರ! ಇದರ ಅರಿವು ಯಾರಿಗೆ ಬರಬೇಕು ? ಸಮಾಜವು ಎಚ್ಚರಗೇಡಿಯಿರುವಾಗ, ಸಮಾಜದ ಏಳಿಗೆ ಹೇಗಾಗಬೇಕು ! ಎಂಬ ಮೊದಲಾದ ವಿಚಾರಗಳು ತಲೆಯಲ್ಲಿ ಹೊಸೆಯುತ್ತಿರುವಾಗಲೇ ನಿದ್ದೆ ಹತ್ತಿತು. 'ಕುಕೂs ಕೂsss' ಎಂದು ಪೋರ್ಟರನ ಮನೆಯ ಕೋಳಿ ಕೂಗಿತು. ಕಣ್ಣು ತೆರೆದು ನೋಡಿದೆ. ಮೂಡಲು ಕೆಂಪಗಾಗಿತ್ತು. ಕತ್ತಲು ಕರಗುತ್ತಿತ್ತು. ಗಾಳಿ ಮಂದವಾಗಿತ್ತು. ನನ್ನ ತಲೆ ಜಡವಾಗಿತ್ತು. ಸಾವರಿಸಿಕೊಂಡು ಎದ್ದು, ಅಲ್ಲಿಯೇ ನಲ್ಲಿಯಲ್ಲಿ ಮುಖ ತೊಳೆದುಕೊಂಡು ಹಳ್ಳಿಯ ದಾರಿ ಹಿಡಿದೆ. ಆ ಅನಾಥ ಹುಡುಗ ಇನ್ನೂ ಕಲ್ಲಿನಮೇಲೆ ಮುದುಡಿಕೊಂಡು ನಿದ್ದೆಗೈಯುತ್ತಿದ್ದ ! ಇದಕ್ಕೆ ಯಾರು ಹೊಣೆ ? ಎಂಬ ವಿಚಾರ ಬಂದಾಗ ........ಹೃದಯ ಉತ್ತರವನ್ನೀಯಲಿಲ್ಲ. ಆದರೆ ದಡಬಡಿಸಿತು ಇಷ್ಟೆ ! ಅಜ್ಞಾನದ ಕತ್ತಲನ್ನು ಜ್ಞಾನ ರವಿ ಮೂಡಿ ಎಂದು ಕಳೆದಾನು—ಈ ಮುಂಜಾವಿನಂತೆ ? ಎಂದು ಏನೋ ಒಟಗುಟ್ಟುತ್ತ ತ್ವರಿತವಾಗಿ ಹಾದಿ ನಡೆಯಹತ್ತಿದೆ.

---

